ಶ್ರೀಜಗದ್ಗುರುಪಂಚಾಚಾರ್ಯಾಃ ಪ್ರಸೀದಂತು.

ಶ್ರೀ ಕಾಶೀನಾಥಗ್ರಂಥಮಾಲಾ

ಪಂಚತ್ರಿಂಶಪುಷ್ಪಂ (೩೫)

# ಶ್ರೀಪತಿಪಂಡಿತಾರಾಧ್ಯರ ಕಾಲನಿರ್ಣಯ

ಲೇಖಕರು :

ನಾಗನೂರು ಬೃಹನ್ಮಠಾಧ್ಯಕ್ಷರಾದ

[illegible]ತ ಶ್ರೀಕಾಶೀನಾಥಶಾಸ್ತ್ರಿಗಳವರು



ಮೈಸೂರು:

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್,

೧೯೩೮

ಬೆಲೆ ೪ ಆಣೆ

ಶ್ರೀ ಕಾಶೀನಾಥಗ್ರಂಥಮಾಲಾ

ಪಂಚತ್ರಿಂಶಪುಷ್ಪಂ (೩೫)

# ಶ್ರೀಪತಿಪಂಡಿತಾರಾಧ್ಯರ ಕಾಲನಿರ್ಣಯ

ಲೇಖಕರು :

ನಾಗನೂರು ಬೃಹನ್ಮಠಾಧ್ಯಕ್ಷರಾದ
ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರು

ಮೈಸೂರು:
ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್,
೧೯೩೮

ಬೆಲೆ ೪ ಆಣೆ

ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಪ್ರಸ್ತಾವನೆ.



ವೀರಶೈವಮತವು ಅನಾದಿಸಂಸಿದ್ಧವಾದುದು. ಈ ಮತತತ್ತ್ವವನ್ನು ನಿಗಮಾಗಮಗಳು ಮುಕ್ತಕಂಠದಿಂದ ಉದ್ಘೋಷಿಸುತ್ತಿರುವವು. ಪೂರ್ವ ಕಾಲದಲ್ಲಿ ಈ ಮತದೊಳಗೆ ಅನೇಕಾನೇಕಜನ ಮಹಾತ್ಮರು ಅವತರಿಸಿ, ಮಹಾಮಹಾಗ್ರಂಥಗಳನ್ನು ರಚಿಸಿರುವರು. ಅವರಲ್ಲಿ ಶ್ರೀಪತಿಪಂಡಿತಾ ರಾಧ್ಯರೊಬ್ಬರು. ಈ ಮಹಾತ್ಮರು ಬ್ರಹ್ಮಸೂತ್ರಗಳ ಮೇಲೆ ವೀರಶೈವ ಸಿದ್ಧಾಂತಪ್ರತಿಪಾದಕವಾದ ಭಾಷ್ಯವನ್ನು ರಚಿಸಿರುವರು. ಈ ಮಹಾತ್ಮರ ಭಾಷ್ಯವು "ಶ್ರೀಕರಭಾಷ್ಯ" ವೆಂಬ ಪವಿತ್ರಾಭಿಧಾನದಿಂದ ಧರಾತಲದಲ್ಲಿ ಬೆಳಗುತ್ತಿರುವದು. ಈ ಮಹನೀಯರು ಕ್ರಿ. ಶ. ೧೧ ನೆಯ ಶತಮಾನದಲ್ಲಿ ಆಂಧ್ರದೇಶವಿರಾಜಮಾನವಾದ ಬಿಜವಾಡದಲ್ಲಿ ಜನ್ಮವೆತ್ತಿ, ಅಗ್ನಿಸ್ತಂಭನಾದ್ಯದ್ಭುತಲೀಲೆಗಳನ್ನು ತೋರ್ಪಡಿಸಿ ಜಗದ್ವಂದ್ಯರಾದರು. ಈ ಮಹಾತ್ಮರು ರಚಿಸಿರುವ "ಶ್ರೀಕರಭಾಷ್ಯ" ವನ್ನು ಬೆಂಗಳೂರು ವೀರಶೈವವಿದ್ಯಾವರ್ಧಕ ಫಂಡಿನವರು, ರಾಜಚರಿತವಿಶಾರದ ಶ್ರೀಮಾನ್ ಸಿ. ಹಯವದನರಾಯ ರವರ ಸಂಪಾದಕತ್ವದಿಂದ ಸಂಸ್ಕೃತಾಕ್ಷರಗಳಲ್ಲಿ ಮುದ್ರಿಸಿ ಪ್ರಸಿದ್ಧಪಡಿಸಿರುವರು. ರಾಯರು ಈ ಭಾಷ್ಯದ ಮೇಲೆ ಇಂಗ್ಲೀಷ್ ಭಾಷೆಯಲ್ಲಿ ಬಹುವಿಶಾಲವಾದುದೊಂದು "ಇಂಟ್ರಡಕ್ಷನ್" ಬರೆದು, ಶ್ರೀಪತಿಪಂಡಿತಾ ರಾಧ್ಯರು ಕ್ರಿ. ಶ. ೧೪೦೦ ರಲ್ಲಿದ್ದರೆಂದು ನಿರ್ಣಯಿಸಿಬಿಟ್ಟಿರುವರು. ರಾಯರು ಪೂರ್ವಾಪರವಿಚಾರಮಾಡದೆ ಬರೆದಿರುವ ಕಾಲವು ಸರಿಯಾಗಿರುವದಿಲ್ಲವೆಂದು ತಾ|| ೪—೧೦—೧೯೩೭ ನೆಯ ಪಂಚಾಚಾರ್ಯ ಪ್ರಭಾಪತ್ರಿಕೆಯಲ್ಲಿ "ಓರ್ವ ವೀರಶೈವಪಂಡಿತ" ಎಂಬ ಅಂಕಿತದಿಂದ,

"ಶ್ರೀಕರಭಾಷ್ಯದ ವಿಮರ್ಶೆ" ಎಂಬ ಒಂದು ವಿಮರ್ಶಾತ್ಮಕಲೇಖವನ್ನು ಪ್ರಮಾಣಪುರಸ್ಸರವಾಗಿ ಬರೆದು, ಶ್ರೀಪತಿಪಂಡಿತಾರಾಧ್ಯರು ಕ್ರಿ.ಶ. ೧೧ನೆಯ ಶತಮಾನದಲ್ಲಿದ್ದರೆಂದು ಪ್ರಸಿದ್ಧಮಾಡಿದೆನು. ರಾಯರು ನಾನು ಬರೆದ ಲೇಖವನ್ನುನೋಡಿ ಸಂತೋಷಪಟ್ಟು, ತಮ್ಮ ಬರವಣಿಗೆಯು ತಪ್ಪಾಗಿರುವುದೆಂದು ಒಪ್ಪಿಕೊಳ್ಳಬೇಕಾಗಿತ್ತು. ಆದರೆ ಅವರು ಹಾಗೆ ಮಾಡದೆ, ತಮ್ಮ ತಪ್ಪುಬರವಣಿಗೆಯನ್ನೇ ಸಾಧಿಸಲುದ್ಯುಕ್ತರಾಗಿ, ತಾ|| ೨೨—೧೧—೧೯೩೭ ನೆಯ ಪಂಚಾಚಾರ್ಯಪ್ರಭಾಪತ್ರಿಕೆಯಲ್ಲಿ ಉತ್ತರವನ್ನು ಪ್ರಕಟಿಸಿದರು. ರಾಯರು ಬರೆದಿರುವ ಉತ್ತರವು ಎಷ್ಟು ಸರಿಯಾದುದಲ್ಲವೆಂದು ಪುನಃ ಪಂಚಾಚಾರ್ಯಪ್ರಭಾಪತ್ರಿಕೆಯ ಕೆಲವು ಸಂಚಿಕೆಗಳಲ್ಲಿ ಸಪ್ರಮಾಣವಾಗಿ ಖಂಡಿಸಿ, ಶಿಲಾಶಾಸನಾದ್ಯನೇಕಾಧಾರಗಳಿಂದ ಶ್ರೀಪತಿಪಂಡಿತಾಚಾರ್ಯರು ಕ್ರಿ. ಶ. ೧೧ ನೆಯ ಶತಮಾನದಲ್ಲಿಯೇ ಇದ್ದರೆಂದು ದೃಢಪಡಿಸಿದೆನು. ನನ್ನ ಖಂಡನಾತ್ಮಕಲೇಖವನ್ನು ನೋಡಿ ಸ್ವಮತಪರಮತೀಯರೆಲ್ಲರೂ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ, ಈ ವಿಷಯವು ಅತ್ಯುಪಯುಕ್ತವಾಗಿರುವದರಿಂದ ಇದನ್ನು ಪುಸ್ತಕರೂಪವಾಗಿ ಪ್ರಸಿದ್ಧಪಡಿಸಬೇಕೆಂದು ಸೂಚಿಸಿದಕಾರಣ, ಅವರ ಅಭಿಪ್ರಾಯದಂತೆ ಪುಸ್ತಕರೂಪದಿಂದ ಮುದ್ರಿಸಿದ್ದಾಗಿದೆ. ವಾಚಕಮಹಾಶಯರು ಈ ಪುಸ್ತಕದಲ್ಲಿರುವ ವಿಷಯಗಳನ್ನೆಲ್ಲ ಕೂಲಂಕಷವಾಗಿ ವಿಮರ್ಶಿಸಿ, ಶ್ರೀಪತಿಪಂಡಿತಾಚಾರ್ಯರ ನಿಜವಾದ ಕಾಲವಾವುದೆಂಬುದನ್ನು ತಿಳಿದುಕೊಳ್ಳಬೇಕೆಂದಾಶಿಸುತ್ತೇನೆ.

ಪಂ|| ಕಾಶೀನಾಥಶಾಸ್ತ್ರೀ.



# ಶ್ರೀಪತಿಪಂಡಿತಾರಾಧ್ಯರ ಕಾಲನಿರ್ಣಯ.

## ಶ್ರೀಕರಭಾಷ್ಯದ ವಿಮರ್ಶೆ.

ಜಗದ್ವಿಖ್ಯಾತರಾದ ಶ್ರೀಪತಿಪಂಡಿತಾರಾಧ್ಯರು ಕ್ರಿ. ಶ. ೧೧ ನೆಯ ಶತಮಾನದಲ್ಲಿ ಈ ಭೂಮಂಡಲವನ್ನಲಂಕರಿಸಿ, ಬ್ರಹ್ಮಸೂತ್ರಗಳ ಮೇಲೆ ವೀರಶೈವಮತಪರವಾದ ಭಾಷ್ಯವನ್ನುರಚಿಸಿರುವ ವಿಷಯವು ಜಗತ್ಪ್ರಸಿದ್ಧವೇ ಅದೆ. ಈ ಭಾಷ್ಯದ ಕೆಲವು ಭಾಗವು ಈಗ್ಗೆ ೭೦-೮೦ ವರ್ಷಗಳ ಕೆಳಗೆ ಆಂಧ್ರಾಕ್ಷರಗಳಿಂದ ಮುದ್ರಿತವಾಗಿದ್ದರೂ, ಮುಂದಿನ ಭಾಗವು ಮುದ್ರಿತವಾಗದೆ ಹಾಗೆಯೇ ಉಳಿದಿತ್ತು. ಇದರಿಂದ ವೀರಶೈವಮತತತ್ತ್ವಜಿಜ್ಞಾಸುಗಳಿಗೆ ಒಂದು ದೊಡ್ಡ ಕೊರತೆಯಾಗಿದ್ದಿತು. ಆದರೆ ಈ ಕೊರತೆಯನ್ನು ರಾಜಸಭಾಭೂಷಣ ದಿವಾನ್ ಬಹದ್ದೂರ್ ಡಾ|| ಸರ್. ಕೆ. ಪಿ. ಪುಟ್ಟಣ್ಣಶೆಟ್ಟರವರು ತಮ್ಮ ಕಾಲದಲ್ಲಿ ದೂರಮಾಡಿ, ಈ ಮತಕ್ಕೆ ಮಹೋಪಕಾರ ಮಾಡಿರುವ ವಿಷಯವು ಸ್ತೋತ್ರಾರ್ಹವಾಗಿದೆ. ಅಸ್ತು!

ಈ ಮಹಾಭಾಷ್ಯದ ಮುದ್ರಣಶೋಧನಾದಿಕಾರ್ಯಗಳನ್ನು ಬೆಂಗಳೂರು ನಿವಾಸಿಗಳಾದ ಶ್ರೀಮಾನ್ ಸಿ. ಹಯವದನರಾಯರವರು ವಹಿಸಿಕೊಂಡಿದ್ದರೆಂದು ತಿಳಿದುಬರುತ್ತದೆ. ಶ್ರೀಹಯವದನರಾಯರವರು ಈ ಮಹಾಗ್ರಂಥದ ಮುದ್ರಣಕ್ಕಾಗಿ ಬಹಳಕಷ್ಟಪಟ್ಟಿರುವರೆಂಬ ವಿಷಯವು ಈ ಗ್ರಂಥವನ್ನು ನೋಡುವದರಿಂದಲೇ ವೇದ್ಯವಾಗುವದಾದರೂ, ಫಲಕಾರಿಯಾಗಿಲ್ಲವೆಂದು ಬಹುವಿಷಾದದಿಂದ ಹೇಳಬೇಕಾಗಿದೆ. ಈ ಸಂದರ್ಭದಲ್ಲಿ ಶ್ರೀರಾಯರವರು ತಮ್ಮ ಸಹಾಯಕ್ಕಾಗಿ ವೇದಾಂತಾದಿಸಕಲಶಾಸ್ತ್ರಗಳನ್ನು ಬಲ್ಲ ೩-೪ ಜನ ಘನವಾದ ವಿದ್ವಾಂಸರನ್ನು ಇಟ್ಟುಕೊಂಡು ಸರಿಯಾಗಿ

ಶೋಧಿಸಿ ತಪ್ಪು ಇಲ್ಲದಂತೆ ಮುದ್ರಣಮಾಡಿಸಿದ್ದರೆ ಇವರಿಗೆ ವಿಶೇಷ ಯಶಸ್ಸು ಬರುತ್ತಿತ್ತು. ಆದರೆ ಇವರು ಹಾಗೆಮಾಡದೆ ತಮಗೆ ತಿಳಿದಂತೆ ಮುದ್ರಣಮಾಡಿಸಿರುವುದರಿಂದ, ಭಾಷ್ಯದಲ್ಲಿ ಅನಂತಾನಂತ ತಪ್ಪುಗಳು ಬಿದ್ದುಹೋಗಿವೆ. ಆ ತಪ್ಪುಗಳ ವಿಷಯವನ್ನು ಬರೆಯಲು ಅತ್ಯಂತವ್ಯಸನ ವೆನಿಸುತ್ತದೆ. ಇದರಿಂದ ಭಾಷ್ಯಪಂಕ್ತಿಗಳಿಗೆ ಸರಿಯಾಗಿ ಅರ್ಥವಾಗದೆ, ಓದುವವರು ಗಾಢಾಂಧಕಾರದಲ್ಲಿ ಪ್ರವೇಶಿಸಿದಂತಾಗುವದು. ಒಂದೊಂದು ಕಡೆಗೆ ಮುಂದಿನ ಪುಟದಲ್ಲಿ ಮುದ್ರಿತವಾಗಬೇಕಾಗಿದ್ದ ವಾಕ್ಯಗಳು ಹಿಂದಿನ ಪುಟದಲ್ಲಿಯೇ ಮುದ್ರಿತವಾಗಿವೆ. ೧೬ ಮತ್ತು ೧೭ ನೆಯ ಪುಟಗಳಲ್ಲಿ ೨೯ ಪಂಕ್ತಿಗಳು ಹೆಚ್ಚಾಗಿ ಮುದ್ರಿತವಾಗಿವೆ. ಈ ಪಂಕ್ತಿಗಳು ೧೮ ನೆಯ ಪುಟ ದಲ್ಲಿಯೂ ಮುದ್ರಿತವಾಗಿವೆ. ೧೭ ನೆಯ ಪುಟದಲ್ಲಿ ಕೆಲವು ಪಂಕ್ತಿಗಳು ಬಿಟ್ಟುಹೋಗಿವೆ. ಇದರಂತೆಯೇ ಅನೇಕಕಡೆಗೆ ವ್ಯತ್ಯಸ್ತವಾಗಿರುವದರಿಂದ ಭಾಷ್ಯದ ಶೋಭೆಯೆಲ್ಲವೂ ಕೆಟ್ಟುಹೋಗಿದೆ. ಅಶುದ್ಧಿಗಳಂತೂ ಪ್ರತಿ ಯೊಂದು ಪುಟದಲ್ಲಿಯೂ ಉಂಟೇಉಂಟು. ಅಶುದ್ಧಿಗಳಿಲ್ಲದ ಪುಟವೇ ಇಲ್ಲವೆಂದು ಹೇಳಿದರೆ ಅತ್ಯುಕ್ತಿಯೆನಿಸದು. ಶ್ರೀಮಾನ್ ಹಯವದನರಾಯರು ಆಂಗ್ಲಭಾಷೆಯಲ್ಲಿ ಘನವಾದ ವಿದ್ವಾಂಸರಾಗಿರಬಹುದು. ಆದರೆ ಶಾಸ್ತ್ರವಿಷ ಯದಲ್ಲಿ ಇವರಿಗೆ ಆ ವಿಧವಾದ ವಿದ್ವತ್ತೆಯು ಅದೆಯೋ ಇಲ್ಲವೋ ಎನ್ನು ವದು ಸಂಶಯಾಸ್ಪದವಾಗಿದೆ. ಏಕೆಂದರೆ–ಇವರು ಈ ಭಾಷ್ಯಕ್ಕೆ ಸಂಸ್ಕೃತ ದಲ್ಲಿ ೭ ಪಂಕ್ತಿಗಳುಳ್ಳ ಒಂದು ಚಿಕ್ಕ ಪೀಠಿಕೆಯನ್ನು ಬರೆದಿರುತ್ತಾರೆ. ಆ ಏಳು ಪಂಕ್ತಿಗಳಲ್ಲಿಯೇ ೧೦-೧೨ ವ್ಯಾಕರಣದೋಷಗಳಿವೆ. ಈ ರೀತಿ ಯಾಗಿ ವ್ಯಾಕರಣದೋಷಗಳಿಂದಲೂ ಒಂದಕ್ಕೊಂದು ಸಂಬಂಧವಿಲ್ಲದಿರುವ ಪದಗಳಿಂದಲೂ ಯುಕ್ತವಾಗಿರುವ ಆ ಪೀಠಿಕೆಯನ್ನು ಮುದ್ರಣಮಾಡಿಸಿರು ವದನ್ನು ನೋಡಿದರೆ ಅತ್ಯಂತವ್ಯಸನವೆನಿಸುತ್ತದೆ. ಇನ್ನುಮುಂದಾದರೂ ಇವರು ಆದಷ್ಟುಬೇಗನೆ ಅಶುದ್ಧಿಮಯವಾದ ಆ ಪೀಠಿಕೆಯನ್ನು ಸರಿಪಡಿಸಿ, ಆ ಭಾಷ್ಯಕ್ಕೂ ತಮ್ಮ ಹೆಸರಿಗೂ ಭೂಷಣವನ್ನುಂಟುಮಾಡಿಕೊಳ್ಳ ಬೇಕೆಂದು ಪ್ರೇಮದಿಂದ ಸೂಚಿಸುವುದಾಗುವದು.

## ಸಿದ್ಧಾಂತಶಿಖಾಮಣಿಯ ವಿಚಾರ.

ಶ್ರೀಮಾನ್ ಹಯವದನರಾಯರು ಶ್ರೀಕರಭಾಷ್ಯದಮೇಲೆ ಇಂಗ್ಲೀಷ್ ಭಾಷೆಯಲ್ಲಿ ಬಹು ವಿಶಾಲವಾದುದೊಂದು ಇಂಟ್ರಡಕ್ಷನ್ " **Introduction** " ಬರೆದಿದ್ದಾರೆ. ಆದರಲ್ಲಿ ಇವರು ಶ್ರೀಪತಿಪಂಡಿತರ ಭಾಷ್ಯದ ಅಭಿಪ್ರಾಯವನ್ನು ಯಾವರೀತಿಯಾಗಿ ಬರೆದಿರುವರೆಂಬ ವಿಷಯವು, ಸಂಸ್ಕೃತದಲ್ಲಿ ಸಕಲವೇದಾಂತಶಾಸ್ತ್ರಗಳನ್ನು ಆಲೋಡನಮಾಡಿರುವ ಇಂಗ್ಲೀಷ್‌ಭಾಷಾಭಿಜ್ಞರಿಗೆ ತಿಳಿಯಬೇಕೇ ಹೊರತು ಅನ್ಯರಿಗೆ ತಿಳಿಯುವಂತಿಲ್ಲ. ಅಸ್ತು! ಆ ಪುಸ್ತಕದಲ್ಲಿ ಇವರು ಮೊದಲು ಕೆಲವು ವಿಷಯಗಳನ್ನು ಬರೆಯುವ ಸಂದರ್ಭದಲ್ಲಿ ಜಗದ್ವಿಖ್ಯಾತವಾದ " **ಸಿದ್ಧಾಂತಶಿಖಾಮಣಿ** " ಯ ವಿಷಯವನ್ನು ಎತ್ತಿಕೊಂಡು, ಸಿದ್ಧಾಂತಶಿಖಾಮಣಿಯನ್ನು ಸೋಸಲೆ ರೇವಣಾರಾಧ್ಯರು ಬರೆದಿರುವರೆಂದು ಬರೆದುಬಿಟ್ಟಿರುವರು. ಇದರಿಂದ ಇವರು ಸಿದ್ಧಾಂತಶಿಖಾಮಣಿಯನ್ನು ಕಣ್ಣಿನಿಂದ ನೋಡಿಯೇ ಇಲ್ಲವೆಂದು ಹೇಳಬೇಕಾಗಿದೆ. ಸಿದ್ಧಾಂತಶಿಖಾಮಣಿಯನ್ನು ಈಗ್ಗೆ ೨ ಸಾವಿರ ವರ್ಷಗಳ ಪೂರ್ವದಲ್ಲಿದ್ದ **ಶ್ರೀಶಿವಯೋಗಿಶಿವಾಚಾರ್ಯ**ರು ರಚಿಸಿರುವರೆಂಬ ವಿಷಯವು ಜಗತ್ಪ್ರಸಿದ್ಧವದೆ. ಶಿವಾಚಾರ್ಯರು ೧ ನೆಯ ಪರಿಚ್ಛೇದದಲ್ಲಿ ತಮ್ಮ ಹೆಸರನ್ನೂ ತಮ್ಮ ವಂಶಪರಂಪರೆಯನ್ನೂ ವಿಶದವಾಗಿ ಉಲ್ಲೇಖಿಸಿರುವರು. ಇವರು ಇದನ್ನೆಲ್ಲ ನೋಡದೆ, ಈಗ್ಗೆ ಸುಮಾರು ೩೦೦ ವರ್ಷಗಳ ಪೂರ್ವದಲ್ಲಿ ಸಿದ್ಧಾಂತಶಿಖಾಮಣಿಗೆ ಕನ್ನಡಭಾಷೆಯಿಂದ ಟೀಕೆಯನ್ನು ಬರೆದಿರುವ ಸೋಸಲೆ ರೇವಣಾರಾಧ್ಯನನ್ನೇ ಮೂಲಗ್ರಂಥಕಾರನನ್ನಾಗಿ ಮಾಡಿಬಿಟ್ಟಿರುವರು. ಬಹುಕಾಲ ಕಷ್ಟಪಟ್ಟು ಬರೆದ ಶ್ರೀಶಿವಯೋಗಿ ಶಿವಾಚಾರ್ಯರು ಎಲ್ಲಿಯೋ ಮಾಯವಾಗಿ ಹೋಗಿರುವರು. ಆ ಮಹಾತ್ಮರ ಸುಳಿವೇ ಇವರ ಲೇಖನದಲ್ಲಿಲ್ಲ. ಈ ಸಂದರ್ಭದಲ್ಲಿ ಇವರು ಈಗ್ಗೆ ೩೦೦ ವರ್ಷಗಳ ಪೂರ್ವದಲ್ಲಿದ್ದ (ಕ್ರಿ.ಶ.1623) ಸೋಸಲೆ ರೇವಣಾರಾಧ್ಯನನ್ನು ಈಗ್ಗೆ ೮೦೦ ವರ್ಷಗಳ ಕೆಳಗೆ ಇದ್ದನೆಂದು ಬರೆದಿರುವದನ್ನು

ನೋಡಿ ಕರ್ಣಾಟಕದೇಶೀಯರೆಲ್ಲರೂ ಬೆರಗಾಗಿ ಹೋಗಿದ್ದಾರೆ. ಇನ್ನು ವರೂ ಇವರು ರಾವಬಹದ್ದೂರ್ ಆರ್. ನರಸಿಂಹಾಚಾರ್ಯರು ಬರೆದಿರು ಕರ್ಣಾಟಕಕವಿಚರಿತ್ರೆಯಲ್ಲಿ ಸೋಸಲೆ ರೇವಣಾರಾಧ್ಯರ ಸಮಗ್ರವಿಷ ವನ್ನು ಓದಿನೋಡಿ, ನಿಜತ್ವವನ್ನು ತಮ್ಮ ಮನಸ್ಸಿನಲ್ಲಿ ಸ್ಥಿರಮಾಡಿಕೊ ಬೇಕು. ಸಿದ್ಧಾಂತಶಿಖಾಮಣಿಯ ಬಗ್ಗೆ ಶ್ರೀ ಹಯವದನರಾಯರವ "ಮದ್ರಾಸ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ" ಯ ಪ್ರಿಂಟಾದ ಕ್ಯಾಟಲಾಗನ್ನು ನೋಡಿ ಹೀಗೆ ಬರೆದಿರಬಹುದೆಂದು ತೋ ತ್ತದೆ. ಆ ಕ್ಯಾಟಲಾಗಿನಲ್ಲಿ ಆ ಲೈಬ್ರರಿಯ ಸಮಸ್ತಪುಸ್ತಕಗಳ ಆದಿಭಾ ಅಂತ್ಯಭಾಗಗಳು ಸ್ವಲ್ಪಸ್ವಲ್ಪವಾಗಿ ತೋರಿಸಲ್ಪಟ್ಟಿವೆ. ಆ ಕ್ಯಾಟಲಾಗನ್ನು ಮುದ್ರಿಸಿದವರು ಸಿದ್ಧಾಂತಶಿಖಾಮಣಿಯ ವಿಷಯವನ್ನು ಬರೆಯುವಾಗ ತಪ್ಪುತಿಳಿವಳಿಕೆಯಿಂದ ಪುಸ್ತಕದ ಪ್ರಾರಂಭದಲ್ಲಿದ್ದ ಟೀಕಾಕಾರನ ಶ್ಲೋ ಗಳನ್ನೇ ಸಿದ್ಧಾಂತಶಿಖಾಮಣಿಯ ಶ್ಲೋಕಗಳೆಂದು ಭ್ರಮಿಸಿ ಮುದ್ರಿ ಬಿಟ್ಟಿದ್ದಾರೆ. ಈ ರಹಸ್ಯವನ್ನು ತಿಳಿಯದೆ ಶ್ರೀ ರಾಯರವರು ಇವ ಸಿದ್ಧಾಂತಶಿಖಾಮಣಿಯ ಪ್ರಾರಂಭದ ಶ್ಲೋಕಗಳೆಂದು ತಿಳಿದುಕೊಂ ಅವುಗಳ ಮೇಲೆಯೇ ಊಹಾಪೋಹಪೂರ್ವಕ ಕಾಲನಿರ್ಣಯಾದಿಗಳನ್ನು ಮಾಡುವ ಭರದಲ್ಲಿ ಬಿದ್ದು ಏನೇನೋ ಬರೆದುಬಿಟ್ಟಿದ್ದಾರೆ. ಇದೇ ರೀ ಯಾಗಿ ಇವರು ಅನೇಕವಿಷಯಗಳನ್ನು ತಪ್ಪುತಪ್ಪಾಗಿ ತಿಳಿದುಕೊಂ ಬರೆದಿರುವದು ಪರಮ ವಿಷಾದಕರವಾಗಿದೆ. ಶ್ರೀಮಾನ್ ಹಯವದ ರಾಯರವರು ಅನ್ಯಮತೀಯರಾಗಿರುವದರಿಂದ ಇವರಿಗೆ ವೀರಶೈವಮ ಗ್ರಂಥಗಳ ವಿಷಯವಾಗಲಿ, ಅಥವಾ ಈ ಮತಸಿದ್ಧಾಂತದ ರಹಸ್ಯವಾಗಲಿ ಹೇಗೆ ತಿಳಿಯಬೇಕು? ಈ ಮತದಲ್ಲಿ ಜನ್ಮವೆತ್ತಿದವರಿಗೇನೇ ಈ ಸಿದ್ಧಾಂ ವನ್ನು ತಿಳಿಯುವುದು ಕಷ್ಟವಾಗಿರುವಾಗ, ಇವರಿಗೆ ತಿಳಿಯದಿರುವದೇನೂ ಆಶ್ಚರ್ಯವಲ್ಲ! ಇದೇ ಈ ವ್ಯತ್ಯಾಸಕ್ಕೆ ಕಾರಣವಲ್ಲದೆ ಮತ್ತಾವ ಕಾರಣವೂ ಇಲ್ಲ. ಅಸ್ತು!

## ಶ್ರೀಪತಿಪಂಡಿತಾರಾಧ್ಯರ ಕಾಲ.

### (ಕ್ರಿ. ಶ. ೧೦೭೨ ರಿಂದ ಪ್ರಾರಂಭ.)

ಶ್ರೀಮಾನ್ ಹಯವದನರಾಯರು ಶ್ರೀಕರಭಾಷ್ಯದ ರಕ್ಷಾಪತ್ರದ ಮೇಲೆ ಎಲ್ಲರಿಗೂ ಎದ್ದು ಕಾಣುವಂತೆ ಶ್ರೀಪತಿಪಂಡಿತಾಚಾರ್ಯರ ಕಾಲ ಕ್ರಿ.ಶ. ೧೪೦೦ ಎಂದು ಮುದ್ರಣಮಾಡಿಸಿದ್ದಾರೆ. ಇವರು ಪ್ರಾಚೀನಗ್ರಂಥಗಳನ್ನು ಪರಿಶೋಧಿಸದೆ ಹೀಗೆ ಬರೆದಿರುವದನ್ನು ನೋಡಿ ಬಹುಜನರು ಪರಿತಪಿಸುತ್ತಿರುವರು. ಯಾವುದಾದರೊಂದು ವಿಷಯವನ್ನು ನಿರ್ಣಯಿಸಬೇಕಾದರೆ ಅನೇಕ ಗ್ರಂಥಗಳನ್ನು ಪರಿಶೀಲಿಸಬೇಕು. ಯಾವಯಾವ ಗ್ರಂಥದಲ್ಲಿ ಯಾವಯಾವ ವಿಷಯವು ಬಂದಿದೆ ಎಂಬುದನ್ನು ವಿಮರ್ಶಿಸಬೇಕು. ವಾಕ್ಯಸರಣಿಯನ್ನು ನೋಡಬೇಕು. ಹಾಗೆಮಾಡದೆ ಯಾರೋ ಮಧ್ಯದಲ್ಲಿ ಸೇರಿಸಿರುವ "ಮಧ್ವ" ಎಂಬ ಶಬ್ದವನ್ನು ಭದ್ರವಾಗಿ ಹಿಡಿದುಕೊಂಡು, ಮಿಕ್ಕ ಗ್ರಂಥಗಳನ್ನು ವಿಮರ್ಶಿಸದೆ ಬರೆದಿರುವದು ಪರಮವಿಷಾದದ ಸಂಗತಿಯಾಗಿದೆ. ಶ್ರೀಪತಿಪಂಡಿತಾರಾಧ್ಯರು ಕ್ರಿ.ಶ. ೧೧ ನೆಯ ಶತಮಾನದಲ್ಲಿದ್ದರೆಂಬ ವಿಷಯವು ಜಗತ್ಪ್ರಸಿದ್ಧವೂ ಇತಿಹಾಸಪ್ರಸಿದ್ಧವೂ ಆಗಿದ್ದರೂ, ಇವರು ೧೪ ನೆಯ ಶತಮಾನದಲ್ಲಿದ್ದರೆಂದು ಬರೆದಿರುವರು. ಯಾರಾದರೂ ಕಾಲನಿರ್ಣಯವನ್ನು ಮಾಡುವಾಗ್ಗೆ ೧೦ ಅಥವಾ ೨೦ ವರ್ಷಗಳ ಅಂತರವನ್ನು ತೋರಿಸುತ್ತಾರೆ. ಆದರೆ ಇವರ ಕಾಲನಿರ್ಣಯದಲ್ಲಿ ೩೦೦ ವರ್ಷಗಳ ವ್ಯತ್ಯಾಸವಾಗಿ ಹೋಗಿದೆ. ಇದೆಂತಹ ಕಾಲನಿರ್ಣಯವೋ ದೇವರಿಗೇ ಗೊತ್ತು! ಇವರು ಹೀಗೆ ಬರೆದಿರುವದನ್ನು ನಂಬಿ ಆಗಲೇ ಕೆಲವರು ಶ್ರೀಪತಿಪಂಡಿತರು ೧೪ ನೆಯ ಶತಮಾನದಲ್ಲಿದ್ದರೆಂದು ಲೇಖಗಳನ್ನು ಬರೆಯಲಿಕ್ಕೂ ಭಾಷಣಗಳನ್ನು ಮಾಡಲಿಕ್ಕೂ ಪ್ರಾರಂಭಿಸಿರುವರು. ಇವರು ತಪ್ಪಾಗಿ ಬರೆದಿರುವ ಕಾಲಮಾನವನ್ನು ನೋಡಿ ಯಾರೂ ಭ್ರಾಂತರಾಗಬಾರದೆಂದು ಕೋರಿಕೆ. ಇವರು ಬರೆದಿರುವ ಕಾಲವು ಎಷ್ಟೂ ಸರಿಯಾದುದಲ್ಲವೆಂಬುದನ್ನೂ, ಶ್ರೀಪತಿಪಂಡಿತಾಚಾರ್ಯರು

೧೧ ನೆಯ ಶತಮಾನದಲ್ಲಿದ್ದರೆಂಬುವನ್ನೂ ಈ ಕೆಳಗೆ ಪ್ರಮಾಣಪುರಸ್ಸ
ವಾಗಿ ಪ್ರತಿಪಾದಿಸತಕ್ಕ ವಿಷಯಗಳಿಂದ ಸರ್ವರೂ ಚೆನ್ನಾಗಿ ತಿಳಿ
ಕೊಳ್ಳಬೇಕು.

ಬಿಜ್ಜಳನಲ್ಲಿ ಮಂತ್ರಿಯಾಗಿದ್ದ ಬಸವನು ೧೨ ನೆಯ ಶತಮಾ
ದಲ್ಲಿದ್ದನೆಂಬ ವಿಷಯವನ್ನು ಎಲ್ಲರೂ ಒಪ್ಪುವರಷ್ಟೆ! ಈ ಬಸವನು ತ
ಗಿಂತಲೂ ಪ್ರಾಚೀನರಾದ ಅನೇಕಜನ ಶಿವಭಕ್ತರ ಮಹಿಮೆಯನ್ನು
ಬಿಜ್ಜಳನ ಮುಂದೆ ಹೇಳುವ ಸಂದರ್ಭದಲ್ಲಿ—"ಎಲೈ ಬಿಜ್ಜಳನೇ!
ಪೂರ್ವದಲ್ಲಿ ಶ್ರೀಪತಿಪಂಡಿತನೆಂಬ ಆಚಾರ್ಯನು ಅನಂತಪಾ
ಭೂಪಾಲನ ಸಭೆಯಲ್ಲಿ ಶಿವಭಕ್ತರಿಗೆ ಸಮಾನರುಂಟೆಂದು ಯಾರು ವಾ
ಸುವರೋ ಅವರನ್ನು ಖಂಡಿಸುವೆನೆಂದು ನುಡಿದು, ಅಗ್ನಿಯನ್ನು ಒಂ
ವಸ್ತ್ರದಲ್ಲಿಟ್ಟು, ಅದನ್ನು ಬನ್ನಿಮರಕ್ಕೆ ಕಟ್ಟಿ ಪರವಾದಿಗಳಿಗೆ ಬೆಂಕಿಯ
ದೊರೆಯದಂತೆ ಮಾಡಿದನು." ಎಂದು ಈ ಮಹಾತ್ಮರ ಮಹಿಮೆಯನ್ನು
ಹೊಗಳಿರುವನು.

ಇತಿಹಾಸಾಂತರಂ ವಕ್ಷ್ಯೇ ಶೃಣು ರಾಜನ್ ಮಹಾಮತೇ ।
ಶಿವಭಕ್ತೋ ಮಹಾಯೋಗೀ ಶ್ರೀಮಾನ್ ಶ್ರೀಪತಿಪಂಡಿತಃ॥
ಶಾಸ್ತ್ರವಾದಾತಿಕುಶಲೋ ಬ್ರಾಹ್ಮಣಾನಾಂ ಸಭಾಂತರೇ ।

..............................................................................

ಅನಂತಪಾಲಭೂಪಾಲಸಮಕ್ಷಂ ಭಕ್ತಿತತ್ಪರಃ ॥
ಇತಿ ಪ್ರತಿಜ್ಞಾಂ ಕೃತ್ವಾಽಽಶು ನೀತ್ವಾಂಗಾರಚಯಂ ಪರಂ ।
ಪಟ್ಟವಸ್ತ್ರಾಂತರೇ ನ್ಯಸ್ಯ ಬಬಂಧ ಸದೃಢಂ ಪರಂ ॥

(ಸಂಸ್ಕೃತ ಬಸವಪುರಾಣ. ಅ. ೩೭)

ಈ ರೀತಿಯಾಗಿ ಬಸವನೇ ಈ ಮಹಾತ್ಮರ ಚರಿತ್ರವನ್ನು ಬಿಜ್ಜಳನ
ಮುಂದೆ ಹೇಳಬೇಕಾದರೆ, ಶ್ರೀಪತಿಪಂಡಿತರು ಬಸವನಿಗಿಂತಲೂ ಪ್ರಾಚೀನ

ರೆಂಬುದು ನಿರ್ವಿವಾದವಷ್ಟೆ! ಇದೇ ವಿಷಯವನ್ನು ಕ್ರಿ. ಶ. ೧೧೯೫ ರಲ್ಲಿದ್ದ ಪಾಲ್ಕುರಿಕೆಸೋಮನಾಥನು ತಾನು ಬರೆದಿರುವ "ಆಂಧ್ರ ಬಸವಪುರಾಣ" ದಲ್ಲಿಯೂ ಬರೆದಿರುವನು.

ಭಕ್ತುಂಡು ಶ್ರೀಪತಿಪಂಡಿತುಂ ಡೀಶು
ಭಕ್ತುನಿ ಕಿಲ ಗೋಟಿಬ್ರಾಹ್ಮಣುಲ್ಯೈನ ।
ನೆನ ಯನ್ನ ನಾಲುಕ ನೆ ಗೋಸಿವ್ಯೆತು
ನನುಚು ನನಂತಪಾಲುನಿ ಸಭಾಸ್ಥಲಿನಿ ॥

(ಆಂಧ್ರಬಸವಪುರಾಣ. ಆಶ್ವಾಸ. ೭)

ಇದಲ್ಲದೆ ಈ ಸೋಮನಾಥನು ಆಂಧ್ರಭಾಷೆಯಲ್ಲಿ "ಮಲ್ಲಿಕಾರ್ಜುನ ಪಂಡಿತಾರಾಧ್ಯ"ರ ಚರಿತ್ರವನ್ನು ಬರೆದಿರುವನು. ಆ ಚರಿತ್ರದಲ್ಲಿ—

ಹರಭಕ್ತಿ ಯುತ್ಪತ್ತಿ ಕಧಿಪತಿ ನಾಗ ।
ಬರಗೆನು ದೊಲ್ಲಿ ಶ್ರೀಪತಿಪಂಡಿತಯ್ಯ ॥
ಚೆನಸಿ ಭಕ್ತಿಕ್ರಿಯಾಸ್ಥಿತಿಕರ್ತ ಯನಗ ।
ಜನಿಯೆನು ಲೆಂಕಮಂಚನಪಂಡಿತಯ್ಯ ॥
ದೂರಾನ್ಯಸಮಯಸಂಹಾರುಡೈ ಚನಿಯೆ ।
ಶೂರುಡು ಮಲ್ಲಿಕಾರ್ಜುನಪಂಡಿತಯ್ಯ ॥
ಖ್ಯಾಪಿತಭಕ್ತಿಕಿ ಗಾರಣಪುರುಷು ।
ಲೈ ಪಂಡಿತತ್ರಯಂ ಬನ ಭುವಿ ಜನಿರಿ ॥

ಈ ಪ್ರಕಾರವಾಗಿ ಶ್ರೀಪತಿಪಂಡಿತರನ್ನೂ, ಮಂಚನಪಂಡಿತರನ್ನೂ, ಮಲ್ಲಿಕಾರ್ಜುನಪಂಡಿತರನ್ನೂ, ಅಸಾಧಾರಣಭಕ್ತಿಯಿಂದ ಸ್ತುತಿಸಿರುವನು. ಇದರಿಂದ ಪಾಲ್ಕುರಿಕೆ ಸೋಮನಾಥನಿಗಿಂತಲೂ ಶ್ರೀಪತಿಪಂಡಿತಾರಾಧ್ಯರು ಪ್ರಾಚೀನರೆಂಬುದು ಸ್ಪಷ್ಟವಾಗುವುದಷ್ಟೆ!

ಬಸವನ ಸಮಕಾಲ (೧೧೬೦) ದಲ್ಲಿದ್ದು ಬಸವನಿಗಿಂತಲೂ ವಯೋವೃದ್ಧನಾಗಿದ್ದ ಮಲ್ಲಿಕಾರ್ಜುನಪಂಡಿತಾರಾಧ್ಯನು, ಆಂಧ್ರಭಾಷೆ ಯಲ್ಲಿ "ಶಿವತತ್ತ್ವಸಾರ" ಎಂಬ ಉದ್ಗ್ರಂಥವನ್ನು ರಚಿಸಿದ್ದಾನೆ. ಈ ಗ್ರಂಥರತ್ನವನ್ನು ಆಂಧ್ರದೇಶಪ್ರಸಿದ್ಧರಾದ ಮ॥ ರಾ॥ ಕೊಮಾರ್ರಾಜು ಲಕ್ಷ್ಮಣರಾವು ಎಂ. ಎ., ಎಂಬವರು ಆಂಧ್ರಸಾಹಿತ್ಯಪರಿಷತ್ತಿನ ಪರವಾಗಿ ಪರಿಶೋಧನೆಮಾಡಿ ಮುದ್ರಿಸಿ ಪ್ರಕಾಶಪಡಿಸಿದ್ದಾರೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ ಶಿವತತ್ತ್ವಸಾರಗ್ರಂಥದಲ್ಲಿ—

ಒಕ್ಕಡೆ ದೈವಮು ಶಿವು ಡನಿ
ನಿಕ್ಕಮು ಸೇಯುಟಕು ಮುಡಿಚೆ ನಿಪ್ಪುಲು ಚೀರನ್।
ಸ್ರುಕ್ಕಕ ಶ್ರೀಪತಿಪಂಡಿತು
ಡಕ್ಕಜಮುಗ ವಿಜಯವಾಡ ನಲಜನಮ್ಮ ಶಿವಾ ॥೪೬॥

ಶ್ರೀಪತಿಪಂಡಿತಾರಾಧ್ಯರು ವಿಜಯವಾಡ(ಬಿಜವಾಡ)ದಲ್ಲಿ ಶಿವನೋರ್ವನೇ ದೈವವೆಂಬುದನ್ನು ಸ್ಥಾಪಿಸುವದಕ್ಕೋಸ್ಕರ ವಸ್ತ್ರದಲ್ಲಿ ಬೆಂಕಿಯನ್ನು ಕಟ್ಟಿ ಮಹಾಶ್ಚರ್ಯವನ್ನುಂಟುಮಾಡಿದರೆಂದು, ಈ ಮಹಾತ್ಮರ ಮಹಿಮೆಯನ್ನು ಬಣ್ಣಿಸಿದ್ದಾನೆ. ಇದರಿಂದ ಮಲ್ಲಿಕಾರ್ಜುನಪಂಡಿತನಿಗಿಂತಲೂ ಶ್ರೀಪತಿ ಪಂಡಿತರು ಪ್ರಾಚೀನರೆಂದು ಸಿದ್ಧವಾಗುವುದಷ್ಟೆ!

ಶ್ರೀಪತಿಪಂಡಿತಾರಾಧ್ಯರು ಯಾವ ಅನಂತಪಾಲರಾಜನ ಆಸ್ಥಾನ ದಲ್ಲಿ ತಮ್ಮ ಮಹಿಮಾಪ್ರಭಾವವನ್ನು ತೋರಿಸಿದರೋ, ಆ ಅನಂತಪಾಲ ರಾಜನು ೧೧ ನೆಯ ಶತಮಾನದಲ್ಲಿದ್ದ ಚಾಳುಕ್ಯತ್ರಿಭುವನಮಲ್ಲದೇವನ ಸಾಮಂತರಾಜನಾಗಿದ್ದು, ಬನವಾಸಿ ಮೊದಲಾದ ಕನ್ನಡ ಪ್ರಾಂತ ಗಳನ್ನೂ, ಮೈಸೂರು ಸೀಮೆಯ ಕೆಲವು ಭಾಗಗಳನ್ನೂ, ಗೋದಾವರಿ, ಗುಂಟೂರು, ಬಿಜವಾಡ, ಕಡಪಾ, ಕರ್ನೂಲು ಮೊದಲಾದ ಆಂಧ್ರ ಪ್ರಾಂತಗಳನ್ನೂ ಆಳುತ್ತಿದ್ದನೆಂಬ ವಿಷಯವು ಶಿಲಾಶಾಸನಗಳಿಂ

ಗೊತ್ತಾಗುತ್ತದೆ. **Inscriptions of Madras Presidency Vol. 11** ಈ ಪುಸ್ತಕದಲ್ಲಿರುವ ಗುಂಟೂರು ಡಿಸ್ಟ್ರಿಕ್ಟಿನ ೩೦೫ ನೆಯ ನಂಬರಿನ ಶಾಸನ ದಲ್ಲಿಯೂ, ಕರ್ನೂಲು ಡಿಸ್ಟ್ರಿಕ್ಟಿನ ೩೫೧ ನೆಯ ನಂಬರಿನ ಶಾಸನ ದಲ್ಲಿಯೂ ಈ ರಾಜನ ವಿಷಯವು ಉಕ್ತವಾಗಿದೆ. ಪೂರ್ವಗೋದಾವರಿ ಡಿ|| ದ್ರಾಕ್ಷಾರಾಮಕ್ಷೇತ್ರದಲ್ಲಿರುವ ಭೀಮೇಶ್ವರದೇವಸ್ಥಾನದಲ್ಲಿರುವ ಒಂದು ಶಾಸನದಲ್ಲಿ, ಈ ರಾಜನ ವಿಷಯವು ಉಕ್ತವಾಗಿದೆ. ಈ ಶಾಸನವು ಕನ್ನಡ ಭಾಷೆಯದಿದ್ದು, **" South Indian Inscriptions Govt. of India " Vol. IV 488-89** ನೆಯ ಪುಟಗಳಲ್ಲಿ ಮುದ್ರಿಸಲ್ಪಟ್ಟಿದೆ. ಇದಲ್ಲದೆ ಮಿ|| **ಬಿ. ಲೂಯಿ ರೈಸ್** ಸಾಹೇಬರವರು ಮೈಸೂರು ಗವರ್ನಮೆಂಟಿನ ಪರ ವಾಗಿ ಶೋಧಿಸಿ ಮುದ್ರಿಸಿರುವ **"Ephigraphia Carnatica " Vol. VII** ಶಿವಮೊಗ್ಗಾ ಡಿ|| ಶಿಕಾರಿಪುರ ತಾಲೂಕಿನ ೧೩-೯೮-೯೯-೧೩೧-೧೪೯ ನೆಯ ಶಾಸನಗಳಲ್ಲಿ ಈ ಅನಂತಪಾಲರಾಜನ ವಿಷಯವು ಬಹುವಿಶದವಾಗಿ ಪ್ರತಿಪಾದಿಸಲ್ಪಟ್ಟಿದೆ. ಈ ಸಮಸ್ತಶಾಸನಗಳು ಅನಂತಪಾಲರಾಜನು ೧೧ ನೆಯ ಶತಮಾನದ ಅಂತ್ಯದಲ್ಲಿದ್ದನೆಂಬುದನ್ನು ಸ್ಪಷ್ಟಪಡಿಸುತ್ತವೆ.

ಮದ್ರಾಸಿನಲ್ಲಿ ಸುಪ್ರಸಿದ್ಧ ತತ್ತ್ವಶಾಸ್ತ್ರಜ್ಞರೂ ಇತಿಹಾಸಜ್ಞರೂ ಆಗಿರುವ ಮ|| ರಾ|| ಟಿ. ಎಸ್. ನಾರಾಯಣಶಾಸ್ತ್ರಿಗಳು, ಬಿ.ಎ.ಬಿ.ಎಲ್., ಮಹಾಶಯರು ೧೯೧೫ ನೆಯ ಇಸ್ವಿ ಮೇ ತಿಂಗಳಲ್ಲಿ– **" ದಿ ಇಂಡಿಯನ್ ರಿವ್ಯೂ "** ಎಂಬ ಜಗದ್ವಿಖ್ಯಾತವಾದ ಇಂಗ್ಲೀಷ್ ಮಾಸಪತ್ರಿಕೆಯಲ್ಲಿ **" The Five Great Schools of Vedanta Philosophy "** ಎಂಬ ಹೆಸರಿನಿಂದ ಅಮೂಲ್ಯವಾದ ಲೇಖವನ್ನು ಬರೆದು ಪ್ರಸಿದ್ಧಪಡಿಸಿರುವರು. ಈ ಮಹಾಶಯರು ತಮ್ಮ ಲೇಖದಲ್ಲಿ—ಬ್ರಹ್ಮಸೂತ್ರಗಳ ಮೇಲೆ ಒಟ್ಟು ೧೧ ಜನ ಆಚಾರ್ಯರು ಭಾಷ್ಯಗಳನ್ನು ಬರೆದಿರುವರೆಂದೂ, ಆ ೧೧ ಜನ ಆಚಾರ್ಯರಲ್ಲಿ **" ಶಂಕರ-ಶ್ರೀಕಂಠ-ರಾಮಾನುಜ-ಶ್ರೀಪತಿ-ಮಧ್ವ "** ಎಂಬ ಐದು ಜನ ಆಚಾರ್ಯರು ರಚಿಸಿರುವ ಭಾಷ್ಯಗಳೇ ಮುಖ್ಯವಾದವು

ಗಳೆಂದೂ, ಶ್ರೀಪತಿಪಂಡಿತರು ಕ್ರಿ. ಶ. ೧೦೭೨ ರಲ್ಲಿ ಜನ್ಮವೆತ್ತಿದ ರೆಂದೂ ಉಲ್ಲೇಖಿಸಿದ್ದಾರೆ. ಈ ಮಹಾಶಯರು ಈ ಐದು ಜನ ಆಚಾರ್ಯರ ಕಾಲವನ್ನು ಕುರಿತು ಈ ಕೆಳಗೆ ಉದಾಹರಿಸಿರುವಂತೆ ಬರೆದಿದ್ದಾರೆ.

Of these eleven Schools of Vedanta Philosophy, those of **Shankara, Srikantha, Ramanuja, Srikara** and **Maddhwa** are the most important and constitute the Five Great Schools of Vedanta Philosophy. Of these, Shankara belongs to the end of the 6th Century B. C. (born 509 B. C.) Srikantha was a contemporary of the Second Great Shankara, the 38th Acharya or successor of Adi Shankara who was born in 788 A. D., and who is unfortunately mistaken for Adi Shankara and belongs to the latter part of the 8th Century A.D. Ramanuja belongs to the earlier part of the 11th Century A.D. (born 1017 A.D.) Srikara and Maddhwa respectively belong to the latter half of the 11th century and the earlier half of the 12th Century A.D. (**Srikara** having been born in **1072** A.D., and Maddhwa in 1119 A.D.)

ಇತ್ಯಾದಿ ವಿಷಯಗಳನ್ನು ವಿಮರ್ಶಿಸಿದರೆ ಶ್ರೀಪತಿಪಂಡಿತಾರಾಧ್ಯರು ಕ್ರಿ.ಶ. ೧೧ ನೆಯ ಶತಮಾನದಲ್ಲಿದ್ದರೆಂಬುದು ಸರ್ವರಿಗೂ ಕನ್ನಡಿಯಂತೆ ಸ್ಪಷ್ಟವಾಗಿ ತೋರುತ್ತದೆ. ಶ್ರೀಕರಭಾಷ್ಯದ ಬಗ್ಗೆ ಸುಮಾರು ೭೦೦-೮೦೦ ಪುಟಗಳಷ್ಟು ಇಂಟ್ರೊಡಕ್ಷನ್ ಬರೆದಿರುವ ರಾಯರು, ಇವುಗಳೊಂದನ್ನೂ ನೋಡದಿರುವುದು ಪರಮಾಶ್ಚರ್ಯಕರವಾಗಿದೆ.

ಶ್ರೀಮಾನ್ ಹಯವದನರಾಯರು ಶ್ರೀಕರಭಾಷ್ಯದಲ್ಲಿ ಮಧ್ವಾಚಾರ್ಯರ ಹೆಸರು ಬಂದಿರುವುದರಿಂದ, ಶ್ರೀಪತಿಪಂಡಿತರು ಮಧ್ವಾಚಾರ್ಯರಿಗಿಂತಲೂ ಈಚಿನವರೆಂದು ಬಲವಾಗಿ ನಂಬಿರುವಂತೆ ತೋರುತ್ತದೆ. ಆದರೆ ಮಧ್ವಾಚಾರ್ಯರ ಹೆಸರು ಬಂದಿರುವ ವಾಕ್ಯಗಳು ಸಾಕ್ಷಾತ್ ಭಾಷ್ಯಕಾರರವೇ? ಅಥವಾ ಇತ್ತೀಚಿಗೆ ಯಾರಾದರೂ ವಿಚಾರಶೂನ್ಯರು ಸೇರಿಸಿದವುಗಳೇ ಎನ್ನುವದನ್ನು ಇವರು ಚೆನ್ನಾಗಿ ವಿಮರ್ಶಿಸಬೇಕಾಗಿತ್ತು. ಹಾಗೆ ವಿಮರ್ಶಿಸದಿರುವದೇ ಈ ವೈಪರೀತ್ಯಕ್ಕೆ ಮುಖ್ಯಕಾರಣವಾಗಿದೆ. ಮಧ್ವಾಚಾರ್ಯರಿಗಿಂತ ಸುಮಾರು ೧೫೦ ವರ್ಷಗಳ ಪೂರ್ವದಲ್ಲಿಯೇ ಇದ್ದ ಶ್ರೀಪತಿಪಂಡಿತರ ಭಾಷ್ಯದಲ್ಲಿ ಮಧ್ವಾಚಾರ್ಯರ ಹೆಸರನ್ನು ಸೇರಿಸಿರುವದೂ, ವ್ಯಾಸಪುರಾಣಗಳಲ್ಲಿ ಮುಸಲ್ಮಾನಚಕ್ರವರ್ತಿಗಳ ಹೆಸರುಗಳನ್ನು ಸೇರಿಸಿರುವದೂ ಇವೆರಡೂ ಒಂದೇ ಮಾಲಿಕೆಯೊಳಗಿನ ಮಣಿಗಳಂತಿದ್ದು, ಕೇವಲ ಹಾಸ್ಯಾಸ್ಪದವಾಗಿದೆ. ಇವರು ಮುದ್ರಿಸಿರುವ ಶ್ರೀಕರಭಾಷ್ಯದ ೨೬೩ ನೆಯ ಪುಟದಲ್ಲಿ "ಮಧ್ವದ್ವೈತಕ್ಷಪಣಕತಾರ್ಕಿಕಾದಯೋ ಜೀವಾನಾಂ ವಿಭುತ್ವಾಂಗೀಕಾರಾತ್ ತನ್ನಿರಸನಾರ್ಥಮೇತದಧಿಕರಣ ಪ್ರಾರಂಭಃ" ಎಂಬ ವಾಕ್ಯವಿದೆ. ಇಂತಹ ಅಸಂಬದ್ಧವಾದ ವಾಕ್ಯವನ್ನು ಭಾಷ್ಯಕಾರರು ಎಂದಾದರೂ ತಮ್ಮ ಕೈಯಿಂದ ಬರೆಯಬಹುದೆ? ರಘುವಂಶವನ್ನು ಓದುವ ಬಾಲಕನೂ ಸಹ ಇಂತಹ ವ್ಯಾಕರಣವಿರುದ್ಧವಾಕ್ಯವನ್ನು ಬರೆಯಲಾರನು. "ತಾರ್ಕಿಕಾದಯಃ" ಎಂಬ ಪ್ರಥಮಾಂತದ ಸಂಬಂಧವು ಎಲ್ಲಿರುವುದೆಂಬುದನ್ನಾದರೂ ಈ ಭಾಷ್ಯವನ್ನು ಪರಿಶೋಧಿಸಿದ ರಾಯರು ಪರ್ಯಾಲೋಚಿಸಬೇಕಾಗಿತ್ತು. ಇಂತಹ ಅಸಂಬದ್ಧವಾಕ್ಯವನ್ನು ಇವರು ಹೇಗೆ ಮುದ್ರಿಸಿದರೋ ತಿಳಿಯದಾಗಿದೆ. ಅಸ್ತು!

ಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಶಂಕರಾಚಾರ್ಯರ ಮತ್ತು ರಾಮಾನುಜಾಚಾರ್ಯರ ಸಿದ್ಧಾಂತವನ್ನು ಖಂಡಿಸಿರುತ್ತಾರೆಂಬುದನ್ನು ತಿಳಿದು, ಇಂಡಿಯಾದೇಶದಲ್ಲಿ ಪ್ರಸಿದ್ಧರಾಗಿರುವ ಮಧ್ವಾಚಾರ್ಯರ ಹೆಸರ

ನ್ನಾದರೂ ಏಕೆ ಬಿಡಬೇಕೆಂದು ಭಾವಿಸಿ, ಅವರ ಸಿದ್ಧಾಂತವನ್ನೂ ಕೂಡ ಇವರು ಖಂಡಿಸಿರುತ್ತಾರೆಂದು ಜಂಭಕೊಚ್ಚಿಕೊಳ್ಳುವದಕ್ಕೋಸ್ಕರ ಅಲ್ಪ ವಿಚಾರಿಗಳಾದ ಯಾರಾದರೂ ಲಿಂಗಧಾರಿಗಳು "ಮಧ್ವ" ಶಬ್ದವನ್ನ ಸೇರಿಸಿರಬಹುದು. ಅಥವಾ ಮತಾಂತರಾಸಹಿಷ್ಣುಗಳಾದ ಪರಮತೀಯರು, ಶ್ರೀಕರಭಾಷ್ಯವು ಪ್ರಾಚೀನವಾದರೆ ವೀರಶೈವಮತಕ್ಕೆ ವಿಶೇಷಶೋಭೆ ಯುಂಟಾಗುವದೆಂದು ಭಾವಿಸಿ, ಇದನ್ನು ಇತ್ತೀಚಿನದನ್ನಾಗಿ ಮಾಡಬೇಕೆಂಬ ಭಾವನೆಯಿಂದ ಆ ಶಬ್ದವನ್ನು ಸೇರಿಸಿರಬಹುದು. ಇದಕ್ಕೆ ಇವೆರಡು ಕಾರಣಗಳಲ್ಲದೆ ಇನ್ನಾವ ಕಾರಣವೂ ತೋರುವುದಿಲ್ಲ. "ಮಧ್ವ" ಎಂಬ ಎರಡು ಅಕ್ಷರಗಳನ್ನು ಸೇರಿಸಲಿಕ್ಕೆ ಅದ್ಭುತವಾದ ಪಾಂಡಿತ್ಯವೂ ಬೇಕಾಗಿಲ್ಲ; ಶ್ರಮವೂ ಬೇಕಾಗಿಲ್ಲ.

ಶ್ರೀಪತಿಪಂಡಿತಾರಾಧ್ಯರು ತಮ್ಮ ಭಾಷ್ಯದಲ್ಲಿ ದ್ವೈತಸಿದ್ಧಾಂತ ವನ್ನು ಖಂಡಿಸಿರುವರು. ಆದರೆ ಅಷ್ಟುಮಾತ್ರದಿಂದಲೇ ಮಧ್ವಾಚಾರ್ಯರ ಸಿದ್ಧಾಂತವನ್ನು ಖಂಡಿಸಿರುವರೆಂದು ತಿಳಿಯಬಾರದು. ಏಕೆಂದರೆ— ದ್ವೈತಸಿದ್ಧಾಂತವು ಮಧ್ವಾಚಾರ್ಯರದೊಬ್ಬರದೇ ಇರುವದಿಲ್ಲ. ತಾರ್ಕಿ ಕಾದಿಗಳೂ ಸಹ ದ್ವೈತಿಗಳೇ ಆಗಿದ್ದಾರೆಂಬ ವಿಷಯವು ಜಗತ್ಪ್ರಸಿದ್ಧವೇ ಅದೆ. ಇತ್ಯಾದಿವಿಷಯಗಳನ್ನು ವಿಚಾರಮಾಡದೆ ಮಧ್ಯದಲ್ಲಿ ಸೇರಿಸಿರುವ ಮಧ್ವಶಬ್ದವನ್ನೇ ಮರೆಹೊಕ್ಕುದಾದರೆ, ಶ್ರೀಪತಿಪಂಡಿತರ ವಿಷಯವನ್ನು ಪ್ರತಿಪಾದಿಸತಕ್ಕ ಸಮಸ್ತಗ್ರಂಥಗಳಿಗೂ, ಶಾಸನಾದಿಗಳಿಗೂ ಅಗ್ನಿಸಂಸ್ಕಾರ ವನ್ನು ಮಾಡಬೇಕಾಗುವ ಪ್ರಸಂಗವು ಪ್ರಾಪ್ತವಾಗುವದು. ಅಸ್ತು !

ನಾನು ಇಲ್ಲಿಯವರೆಗೆ ನಾನಾವಿಧಪ್ರಮಾಣಪುರಸ್ಸರವಾಗಿ ಪ್ರತಿಪಾ ದಿಸಿದ ವಿಷಯವನ್ನು ರಾಯರವರು ಪೂರ್ಣಮನಸ್ಸಿಗೆ ತಂದುಕೊಂಡು, ಶ್ರೀಪತಿಪಂಡಿತಾರಾಧ್ಯರ ಸರಿಯಾದ ಕಾಲವನ್ನೂ, ಸಿದ್ಧಾಂತಶಿಖಾ ಮಣಿಯ ವಿಷಯವನ್ನೂ ಬೇರೆಯಾಗಿ ಮುದ್ರಣಮಾಡಿಸಿ, ಆ ಗ್ರಂಥದಲ್ಲಿ ಸೇರಿಸಬೇಕೆಂದು ಕೋರಿಕೆ. ರಾಯರವರು ಈ ಕಾರ್ಯವನ್ನು ನಿಶ್ಚಯವಾಗಿ ನೆರವೇರಿಸುವರೆಂದು ಸರ್ವರೂ ನಂಬಿದ್ದಾರೆ.

## ಮ॥ ರಾ॥ ಹಯವದನರಾಯರ ಉತ್ತರದ ಖಂಡನ.



ನಾನು ಬರೆದ "ಶ್ರೀಕರಭಾಷ್ಯದ ವಿಮರ್ಶೆ" ಎಂಬ ಲೇಖಕ್ಕೆ ರಾಯರು ಉತ್ತರವನ್ನು ಬರೆದು ಪ್ರಸಿದ್ಧಪಡಿಸಿದರು. ರಾಯರು ಬರೆದಿರುವ ಉತ್ತರದಲ್ಲಿ ಹೆಚ್ಚಿನ ವಿಷಯಗಳೇನೂ ಇರುವದಿಲ್ಲ. ಇಂಟ್ರೊಡಕ್ಷನ್ನಿನಲ್ಲಿ ಬಂದಿರುವ ಅಸಂಬದ್ಧರಾಗಗಳೇ ಪುನಃ ಅಲ್ಲಿಯೂ ಬಂದಿವೆ. ರಾಯರು ನನ್ನ ಲೇಖನದಮೇಲೆ ಉತ್ತರವನ್ನು ಹೇಗೆ ಅಸಂಬದ್ಧವಾಗಿ ಬರೆದಿರುವರೆಂಬ ವಿಷಯವು, ನನ್ನೀ ಖಂಡನಾತ್ಮಕ ಲೇಖದಿಂದ ವಾಚಕರಿಗೆ ಸ್ಪಷ್ಟವಾಗುವದು. ವಾಚಕರು ಪೂರ್ಣವಿಚಾರಪೂರಿತದೃಷ್ಟಿಯಿಂದ ಪರಿಶೀಲಿಸಬೇಕು. ರಾಯರು ತಮ್ಮ ಉತ್ತರದ ಪ್ರಾರಂಭದಲ್ಲಿಯೇ ಅಸಂಬದ್ಧವಾಗಿ ಬರೆದ ಉತ್ತರವಿದು—

> "ಭಾಷ್ಯಭಾಗಕ್ಕೆ ನಾನು ಬರೆದಿರುವ ಪೀಠಿಕೆಯು ಬಹು ಸಂಕ್ಷೇಪವಾಗಿದೆಯೆಂದು ಅವರು ಹೇಳಿದ್ದಾರೆ. ಪೀಠಿಕೆಯನ್ನು ಬೇಕೆನ್ನುವವರು ಇಂಗ್ಲೀಷನ್ನು ಬಲ್ಲ ಪಂಡಿತರು; ಅಥವಾ ಮೂಲಗ್ರಂಥವನ್ನಲ್ಲದೆ ಮತ್ತಾವುದನ್ನೂ ಬಯಸದೆ ಇರತಕ್ಕವರು. ಪಂಡಿತರಿಗೆ ಬೇಕಾದ ವಿಚಾರಗಳೆಲ್ಲವೂ ಮೂಲಗ್ರಂಥದ ಅನುಬಂಧಗಳಲ್ಲಿಯೂ ಇಂಗ್ಲೀಷ್ ಭಾಷೆಯ ಭೂಮಿಕೆಯಲ್ಲಿಯೂ ದೊರೆಯುತ್ತವೆ. ಆದುದರಿಂದ ಪೀಠಿಕೆಯಲ್ಲಿ ವಿಷಯಗಳನ್ನು ಬೇಕೆಂದೇ ಸಂಕ್ಷೇಪ ಮಾಡಲಾಯಿತು."

ಎಂದು ಬರೆದಿದ್ದಾರೆ. ನಾನು ಮೊದಲು ಬರೆದ ಲೇಖದಲ್ಲಿ, ಇವರು ಚಿಕ್ಕಪೀಠಿಕೆಯನ್ನು ಬರೆದುದಕ್ಕಾಗಿ ಆಕ್ಷೇಪಿಸಿಯೇ ಇಲ್ಲ. ಇವರು ೭ ಪಂಕ್ತಿಗಳುಳ್ಳ ಚಿಕ್ಕಪೀಠಿಕೆಯನ್ನು ಬರೆದಿದ್ದರೂ ಅದರಲ್ಲಿಯೇ ೧೦-೧೨ ವ್ಯಾಕರಣದೋಷಗಳಿವೆ. ಆದುದರಿಂದ ರಾಯರಿಗೆ ಸಂಸ್ಕೃತ ಭಾಷೆಯು ಸರಿಯಾಗಿ ಬರುವದಿಲ್ಲವೆಂಬ ವಿಷಯವನ್ನು ಬರೆದಿದ್ದೆನು. ನಾನು ಹೀಗೆ ಬರೆದುದಕ್ಕೆ ಅವರು ಬರೆದಿರುವ ಉತ್ತರವನ್ನು ನೋಡಿದರೆ ನಗೆ ಬರುತ್ತದೆ. "ಕಿವುಡ ಕಿಚ್ಚಡಿ ಬೇಡಿದರೆ ಗೌಡ ಹಚ್ಚಡ ಕೊಟ್ಟ"

ಎಂಬ ಗಾದೆಯಂತೆ ಇವರ ಉತ್ತರವಾಗಿರುತ್ತದೆ. ರಾಯರು "ನಾನು ಸಂಸ್ಕೃತದಲ್ಲಿ ಬರೆದಿರುವ ಪೀಠಿಕೆಯು ಅಶುದ್ಧಿಮಯ ವಾಗಿರುವದು ನಿಜ. ಅದನ್ನು ಸರಿಪಡಿಸಿಕೊಳ್ಳುತ್ತೇನೆ" ಎಂದು ಅದಕ್ಕೆ ಉತ್ತರವನ್ನು ಬರೆಯಬೇಕಾಗಿತ್ತು. ಹೀಗೆ ಬರೆದರೆ ತಮ್ಮ ಗೌರವಕ್ಕೆ ಹಾನಿಯು ಬರಬಹುದೆಂದು ತಿಳಿದುಕೊಂಡು ರಾಯರು ಹೀಗೆ ಅಡ್ಡದಾರಿ ಯನ್ನು ಹಿಡಿದಿರಬಹುದೆಂದು ತೋರುತ್ತದೆ. ರಾಯರು ಗ್ರಂಥವನ್ನು ಮುದ್ರಣಮಾಡಿಸಿ ತಪ್ಪುತಪ್ಪಾಗಿ ಬರೆದು ಬಂಧನದಲ್ಲಿ ಶಿಲುಕಿಹೋಗಿ ದ್ದಾರೆ. ಈಗ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಮಾಡಿದರೆ ಅದೆಂದಾದರೂ ಸಾಧ್ಯವಾದೀತೆ? ತಪ್ಪನ್ನು ಒಪ್ಪಿಕೊಳ್ಳದೆ ಸುಮ್ಮನೆ ವಿಷಯವನ್ನು ಮರೆಮಾಚುವದಕ್ಕೆ ಹೋದರೆ ಲೋಕದಲ್ಲಿ ಹಾಸ್ಯಾಸ್ಪದವಾಗುವದಲ್ಲದೆ ಮತ್ತಾವ ಪುರುಷಾರ್ಥವೂ ಸಿದ್ಧಿಸುವಂತಿಲ್ಲ. ಅಸ್ತು!

ರಾಯರು ಶ್ರೀಕರಭಾಷ್ಯದ ಪ್ರಾರಂಭದಲ್ಲಿ—

"ಶ್ರೀಮದ್ಭಿಃ ಶ್ರೀಪತಿಪಂಡಿತಾಚಾರ್ಯೈಃ ಪ್ರಣೀತಂ ಶ್ರೀಕರಭಾಷ್ಯಾಖ್ಯಬ್ರಹ್ಮಮೀಮಾಂಸಾವೇದಾಂತಸೂತ್ರಾರ್ಥ ಪ್ರಕಾಶಿಕ ಮೂಲಗ್ರಂಥಾನ್ ಅಸ್ಮಿನ್ ದ್ವಿತೀಯಭಾಗೇ ಸಮಾವಿಷ್ಟಿತಂ ॥ ಅಧ್ಯೇತ್ರೃಣಾಂ-ಪಠನಕಾರಿಣಾಂ-ಪಾಠ ಕಾನಾಂಚ ಭಾಷ್ಯೇಽಸ್ಮಿನ್ನಂತರ್ಗೃಹೀತ ಬಹ್ವಭಿಃ ಪರಿಶಿಷ್ಟೈಃ ಅಸ್ಯ ಗ್ರಂಥಸ್ಯ ಪರಿಶೀಲನೇ ಪಠನೇಚ ತೇಷಾಮತ್ಯಂತೋ ಪಕಾರಿಕಾಂ ಭವಿತುಮರ್ಹತೀತಿ ಸಂಪ್ರತ್ಯಾಶಾವಿಷ್ಟಾಮಃ॥ ಕೇಚಿದ್ಭಿಃ ವ್ಯಾಖ್ಯಾತೃಭಿಃ ಪ್ರಮುಖ್ಯೈಃ ಕೃತ ಅಧಿಕರಣಾದಿ ವಿಭಾಗವ್ಯತ್ಯಾಸರೀತ್ಯಾ ಪರಾಮರ್ಶನೇ ತೇಷಾಂ ಪರಸ್ಪರ ಸಿದ್ಧಾಂತವ್ಯತ್ಯಾಸೋಽಪಿ ಅವಗಾಹಯಿತುಂ ಶಕ್ಯಮಿತಿ ತೇಷಾಂ ಚತುರ್ಥ-ಪಂಚಮ-ಷಷ್ಠ ಪರಿಶಿಷ್ಟೇಷು ಸವಿಶೇಷಾ ಭಿನಿವೇಶೋ ಸಾವಧಾನತಯಾ ಅಭ್ಯರ್ಥಿತಃ॥ ಬ. ಕ. ಷ. ರಾ.

ಈ ರೀತಿಯಾಗಿ ಸಂಸ್ಕೃತಭಾಷೆಯಲ್ಲಿ ಒಂದು ಚಿಕ್ಕ ಪೀಠಿಕೆಯನ್ನು ಬರೆದಿದ್ದಾರೆ. ಈ ವಿಧವಾದ ಅಶುದ್ಧ ಮತ್ತು ಅಸಂಬದ್ಧ ವಾಕ್ಯಗಳನ್ನು ರಘುವಂಶವನ್ನು ಓದುವ ಬಾಲಕನೂ ಕೂಡ ಬರೆಯಲಾರನು. ಈ ಪ್ರಪಂಚದಲ್ಲಿ ಇಂದಿನವರೆಗೆ ಯಾರೂ ಸಂಸ್ಕೃತದಲ್ಲಿ ಈ ರೀತಿಯಾಗಿ ಅಶುದ್ಧವಾಕ್ಯಗಳನ್ನು ಬರೆದು ಗ್ರಂಥಗಳಲ್ಲಿ ಮುದ್ರಿಸಿರಲಾರರು. ಈ ವಾಕ್ಯಗಳು ಲಿಂಗ-ವಿಭಕ್ತಿ-ಕ್ರಿಯಾ-ಅರ್ಥ ಮೊದಲಾದವುಗಳ ಗೊತ್ತುಗುರಿಯಿಲ್ಲದೆ ಪರಬ್ರಹ್ಮದಂತೆ ಮೀರೆವಿಾರಿ ಹೋಗಿವೆ. ಇವರು ಈ ಪೀಠಿಕೆಯಲ್ಲಿ ಉಪಯೋಗಿಸಿರುವ ಪ್ರಯೋಗಗಳು ಯಾವದೇಶದ ಸಂಸ್ಕೃತಭಾಷೆಯಲ್ಲಿರುವವೋ ಎಂಬುದು ಯಾರಿಗೂ ತಿಳಿಯದಾಗಿದೆ. ಈ ರೀತಿಯಾಗಿ ಸಂಸ್ಕೃತದಲ್ಲಿ ಮಹಾಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ರಾಯರು ಶ್ರೀಕರಭಾಷ್ಯವನ್ನು ಎಷ್ಟುಮಟ್ಟಿಗೆ ಪರಿಶೋಧಿಸಿರಬಹುದೆನ್ನುವದನ್ನು ವಿಚಾರಶೀಲರು ಪರ್ಯಾಲೋಚಿಸಬೇಕು. ಸಂಸ್ಕೃತಭಾಷೆಯೇ ಸೋಂಕದ ಜರ್ಮನ್ ಮೊದಲಾದ ದೇಶಗಳಲ್ಲಿ ಮುದ್ರಿತವಾದ ಗ್ರಂಥಗಳು ಎಷ್ಟೋ ಶುದ್ಧವಾಗಿವೆ. ಸಂಸ್ಕೃತಭಾಷೆಗೆ ತಾಯ್ಮನೆಯೆನಿಸಿದ ಭಾರತದೇಶದಲ್ಲಿ ಈ ಗ್ರಂಥವು ಈ ರೀತಿ ಅಶುದ್ಧವಾಗಿ ಮುದ್ರಿತವಾಗಬೇಕಾದರೆ ಇದು ವೀರಶೈವಮತದ ಪುಣ್ಯವಿಶೇಷವೆಂದೇ ಭಾವಿಸಬೇಕಾಗಿದೆ. ಇಂಥವರ ಕೈಯಲ್ಲಿ ಈ ಮಹಾಭಾಷ್ಯವನ್ನು ಶೋಧಿಸಿ ಮುದ್ರಿಸಲಿಕ್ಕೆ ವೀರಶೈವ ಫಂಡಿನವರು ಯಾವ ಧೈರ್ಯದಮೇಲೆ ಕೊಟ್ಟರೋ ಎಂಬುದು ಯಾರಿಗೂ ತಿಳಿಯದಾಗಿದೆ. ಅಸಂಖ್ಯದ್ರವ್ಯವನ್ನು ವೆಚ್ಚಮಾಡಿಸಿಕೊಂಡು ಅಶುದ್ಧದೇಹಿಯಾಗಿ ಹೊರಬಿದ್ದಿರುವ ಆ ಮಹಾಭಾಷ್ಯವನ್ನು ನೋಡಿದರೆ, ವೀರಶೈವಪಂಡಿತರ ಹೃದಯವು ತಲ್ಲಣಿಸುತ್ತಿರುವದು. ಅಶುದ್ಧಿಮಯವಾಗಿರುವ ಈ ಭಾಷ್ಯವನ್ನು ದೇಶದೇಶಾಂತರಗಳಿಗೆ ಕಳುಹಿಸಿರುವದಂತೂ ಬಹಳ ಅನ್ಯಾಯವು! ಒಳಗಿರುವ ಅಶುದ್ಧಿಗಳನ್ನು ನೋಡದೆ ಬೈಂಡಿಂಗ್ ಮೊದಲಾದ ಮೇಲಿನ ಆರ್ಭಟವನ್ನೇ ನೋಡಿ ಬೆರಗಾಗಿ ಕೆಲಜನ ದೊಡ್ಡ

ಮನುಷ್ಯರು ಬರೆದ ಪತ್ರಗಳನ್ನು ರಾಯರು ಆ ಗ್ರಂಥದ ರಕ್ಷಾಪತ್ರದಮೇಲೆ ಮುದ್ರಿಸಿರುವರು. ಆ ಪತ್ರಗಳಿಂದ ಯಾವ ಪ್ರಯೋಜನವೂ ಇಲ್ಲ. ಅವರು ವರ್ಣಿಸಿ ಬರೆದಿರುವ ಪತ್ರಗಳು ಭಾಷ್ಯದಲ್ಲಿರುವ ಅಶುದ್ಧಿಗಳನ್ನು ಎಂದೂ ಶುದ್ಧಿಗೊಳಿಸಲಾರವು. ಆವರು ಬರೆದ ಪತ್ರಗಳನ್ನೇ ನೋಡಿ ರಾಯರು ಸಂತೋಷಸಾಗರವಲ್ಲಿ ಲೋಲಾಡಬಾರದು. ಪತ್ರಗಳನ್ನು ಬರೆದಿರುವ ಮಹಾಶಯರು, ವಿವೇಚನಾತ್ಮಕದೃಷ್ಟಿಯಿಂದ ಪುನಃ ಪರ್ಯಾಲೋಚಿಸಿದರೆ ಇಂತಹ ಅಶುದ್ಧಿಮಯಗ್ರಂಥಕ್ಕೆ ನಾವು ಸುಮ್ಮನೆ ಪತ್ರವನ್ನು ಬರೆದೆವಲ್ಲಾ! ಎಂದು ಪಶ್ಚಾತ್ತಾಪಪಡದೆ ಇರಲಾರರು. ಆಸ್ತು! ಇನ್ನು ಸಿದ್ಧಾಂತಶಿಖಾಮಣಿಯ ವಿಷಯವನ್ನು ಪರಿಶೀಲಿಸೋಣ! ನಾನು ಮೊದಲು ನನ್ನ ಲೇಖದಲ್ಲಿ—

“ಜಗದ್ವಿಖ್ಯಾತವಾದ ಸಿದ್ಧಾಂತಶಿಖಾಮಣಿಯನ್ನು ಸೋಸಲೆ ರೇವಣಾರಾಧ್ಯರು ಬರೆದಿರುವರೆಂದು ರಾಯರು ಬರೆದುಬಿಟ್ಟಿರುವರು. ಇದರಿಂದ ಆವರು ಸಿದ್ಧಾಂತಶಿಖಾಮಣಿಯನ್ನು ಕಣ್ಣಿನಿಂದ ನೋಡಿಯೇ ಇಲ್ಲವೆಂದು ಹೇಳಬೇಕಾಗಿದೆ. ಸಿದ್ಧಾಂತಶಿಖಾಮಣಿಯನ್ನು ಈಗ್ಗೆ ೨ ಸಾವಿರ ವರ್ಷಗಳ ಪೂರ್ವದಲ್ಲಿದ್ದ ಶಿವಯೋಗಿ ಶಿವಾಚಾರ್ಯರು ರಚಿಸಿರುವರೆಂಬ ವಿಷಯವು ಜಗತ್ಪ್ರಸಿದ್ಧವದೆ. ಶ್ರೀಶಿವಾಚಾರ್ಯರು ೧ ನೆಯ ಪರಿಚ್ಛೇದದಲ್ಲಿ ತಮ್ಮ ಹೆಸರನ್ನೂ ತಮ್ಮ ವಂಶಪರಂಪರೆಯನ್ನೂ ವಿಶದವಾಗಿ ಉಲ್ಲೇಖಿಸಿರುವರು. ಇವರು ಇದನ್ನೆಲ್ಲ ನೋಡದೆ, ಈಗ್ಗೆ ಸುಮಾರು ೩೦೦ ವರ್ಷಗಳ ಪೂರ್ವದಲ್ಲಿ ಸಿದ್ಧಾಂತಶಿಖಾಮಣಿಗೆ ಕನ್ನಡಭಾಷೆಯಿಂದ ಟೀಕೆಯನ್ನು ಬರೆದಿರುವ ಸೋಸಲೆ ರೇವಣಾರಾಧ್ಯನನ್ನೇ ಮೂಲಗ್ರಂಥಕಾರನನ್ನಾಗಿ ಮಾಡಿಬಿಟ್ಟಿರುವರು. ಬಹುಕಾಲ ಕಷ್ಟಪಟ್ಟು ಬರೆದ ಶ್ರೀಶಿವಯೋಗಿಶಿವಾಚಾರ್ಯರು ಎಲ್ಲಿಯೋ ಮಾಯವಾಗಿ ಹೋಗಿರುವರು. ಆ ಮಹಾತ್ಮರ ಸುಳಿವೇ ಇವರ ಲೇಖನ

ದಲ್ಲಿಲ್ಲ. ಈ ಸಂದರ್ಭದಲ್ಲಿ ಇವರು ಈಗ್ಗೆ ೩೨೦ ವರ್ಷಗಳ ಪೂರ್ವದಲ್ಲಿದ್ದ (ಕ್ರಿ. ಶ. 1623) ಸೋಸಲೆ ರೇವಣಾರಾಧ್ಯನನ್ನು ೮೦೦ ವರ್ಷಗಳ ಕೆಳಗೆ ಇದ್ದನೆಂದು ಬರೆದಿರುವದನ್ನು ನೋಡಿ ಕರ್ಣಾಟಕ ದೇಶೀಯರೆಲ್ಲರೂ ಬೆರಗಾಗಿ ಹೋಗಿದ್ದಾರೆ. ”

ಈ ರೀತಿಯಾಗಿ ಬರೆದಿದ್ದೇನೆ. ಇಷ್ಟು ಬರೆದಮೇಲೆಯೂ ಸಹ ರಾಯರು ಸಿದ್ಧಾಂತಶಿಖಾಮಣಿಯನ್ನು ಕಣ್ಣಿನಿಂದ ನೋಡದೆ, ಇದಕ್ಕೆ ಈ ಕೆಳಗೆ ಕಾಣಿಸಿದಂತೆ ಅಸಂಬದ್ಧವಾದ ಉತ್ತರವನ್ನು ಬರೆದಿರುವರು.

“ ಸಿದ್ಧಾಂತಶಿಖಾಮಣಿಯನ್ನು ರಚಿಸಿದ ಕಾಲ, ಆ ಗ್ರಂಥಕರ್ತನ ವಿಚಾರ ಇವುಗಳಲ್ಲಿ ನಾನು ಭ್ರಾಂತಿಪಟ್ಟಿರುವುದಾಗಿ ಟಿಪ್ಪಣಿಕಾರರು ಸೂಚಿಸಿದ್ದಾರೆ. ಆ ಗ್ರಂಥವನ್ನು ಶಿವಯೋಗಿಶಿವಾಚಾರ್ಯರು ೩ ಸಾವಿರ ವರ್ಷಗಳ ಹಿಂದೆ ರಚಿಸಿದರೆಂದೂ, ಅದು ಲೋಕಪ್ರಸಿದ್ಧವಾದ ಸಂಗತಿಯೆಂದೂ ಟಿಪ್ಪಣಿಕಾರರು ಹೇಳಿರುವದನ್ನು ಪರಮಭಕ್ತಿಯುಳ್ಳವರು ನಂಬುತಕ್ಕದೇ ಹೊರತು ವಿಚಾರಪರರಾದ ಈಗಣ ಪಂಡಿತರು ನಂಬುವದಕ್ಕಾಗುವದಿಲ್ಲ.............. ಶಿವಯೋಗಿಯ ಗ್ರಂಥದ ಆಧಾರದ ಮೇಲೆ ರೇವಣಾಚಾರ್ಯರು ರಚಿಸಿದ ಗ್ರಂಥವು ಶ್ರೀಪತಿಪಂಡಿತಾಚಾರ್ಯರಿಗೆ ತಿಳಿದಿದ್ದ ಕಾರಣ ಇವರು ರೇವಣಾಚಾರ್ಯರಿಗಿಂತ ಈಚಿನ ಕಾಲದವರು ಎಂದು ಸೂಚಿಸಲಾಯಿತು. ನಾನು ರೇವಣಾಚಾರ್ಯರ ಗ್ರಂಥವನ್ನು ಎಷ್ಟೋ ಸಲ ಓದಿದ್ದೇನೆ. ಅದರಲ್ಲಿ ಪ್ರತಿಪಾದಿತವಾದ ಮೂಲತತ್ತ್ವಗಳು ಸಂಪ್ರದಾಯಕವಾಗಿ ಅಗಸ್ತ್ಯಮುನಿಗಳಿಂದ ಉಂಟಾದವೆಂದೂ, ರೇವಣಾಚಾರ್ಯರು ಅವರಿಂದ ಉಪದೇಶವನ್ನು ಪಡೆದು ಅವುಗಳನ್ನು ಲೋಕಕ್ಕೆ ಬೋಧಿಸಿದರೆಂದೂ ತಿಳಿದುಕೊಂಡಿದ್ದೇನೆ.”

ರಾಯರು ಈ ರೀತಿಯಾಗಿ ಬರೆದಿರುವ ವಾಕ್ಯಗಳನ್ನು ಓದಿ ವೀರಶೈವರೆಲ್ಲರೂ ನಗುತ್ತಿರುವರು. ರಾಯರಂಥ ಶೋಧಕರು ಈ ಭೂಮಂಡಲದಲ್ಲಿ ಜನ್ಮವನ್ನು ತಾಳುವದೇ ದುರ್ಲಭವೆಂದು ಹೇಳಬಹುದಾಗಿದೆ. ಇಂತಹ ಶೋಧಕರಿಂದ ತಮ್ಮ ಭಾಷ್ಯವನ್ನು ಶೋಧಿಸಿಕೊಂಡ ಶ್ರೀಪತಿಪಂಡಿತರ ಸುದೈವವನ್ನು ಎಷ್ಟು ವರ್ಣಿಸಿದರೂ ತೀರದು. ಇರಲಿ; ರಾಯರು ಸಿದ್ಧಾಂತ

 

ಶಿಖಾಮಣಿಯನ್ನು ಅನೇಕಸಲ ಓದಿರುವರಂತೆ! ಅದರಲ್ಲಿ ಅಗಸ್ತ್ಯರಿ
ರೇಣುಕರು ಉಪದೇಶವನ್ನು ಪಡೆದುಕೊಂಡ ವಿಷಯವು ಅದೆಯಂತೆ!
ಅಬ್ಬಾ! ರಾಯರ ಓದುವಿಕೆಯೇ ಓದುವಿಕೆ. ರಾಯರು ಸಿದ್ಧಾಂತಶಿಖಾ
ಮಣಿಯನ್ನು ಎಷ್ಟುಸಾರೆ ಓದಿನೋಡಿದರೂ ಕಣ್ಣುಕಟ್ಟಿಕೊಂಡು ಓದಿ
ಬಹುದು; ಇಲ್ಲವೆ ಅಮಾವಾಸ್ಯೆಯ ದಿವಸ ಮಧ್ಯರಾತ್ರಿಯ ಕತ್ತಲೆಯ
ಕುಳಿತುಕೊಂಡು ಚಿಂತನಮಾಡಿರಬಹುದು; ಅಥವಾ ಸ್ವಪ್ನಾವಸ್ಥೆಯ
ಪರಿಶೀಲಿಸಿರಬಹುದು; ಇಲ್ಲವೆ ಗ್ರಂಥವನ್ನು ತಲೆಕೆಳಗಾಗಿ ಹಿಡಿದುಕೊಂಡು
ಓದಿರಬಹುದು. ರಾಯರ ಲೇಖನಿಯು ಪ್ರತಿಯೊಂದು ವಿಷಯವನ್ನು
ಹೀಗೇಕೆ ಉಲಟಾಪಲಟಾ ಬರೆಯುತ್ತಿರುವದೋ? ಈ ಲೇಖನಿಯ ನೀ
ಯನ್ನು ಕಂಡುಹಿಡಿಯುವುದೇ ಬಹುಕಷ್ಟವಾಗಿದೆ. ಇರಲಿ; ರಾಯ
ಇನ್ನುಮೇಲಾದರೂ ಸಿದ್ಧಾಂತಶಿಖಾಮಣಿಯಲ್ಲಿರುವ ವಿಷಯವನ್ನು
ಪರಾಮರ್ಶಿಸಬೇಕು.

॥ ಅಗಸ್ತ್ಯ ಉವಾಚ ॥

ರೇಣುಕಂ ತ್ವಾಂ ವಿಜಾನಾಮಿ ಗಣನಾಥಂ ಶಿವಪ್ರಿಯಂ ।
ಅವತೀರ್ಣಮಿಮಾಂ ಭೂಮಿಂ ಮದನುಗ್ರಹಕಾಂಕ್ಷಯಾ ॥
ತ್ವನ್ಮುಖಾಚ್ಛ್ರೋತುಮಿಚ್ಛಾಮಿ ಸಿದ್ಧಾಂತಂ ಶ್ರುತಿಸಮ್ಮತಂ
ಸರ್ವಜ್ಞ ವದ ಮೇ ಸಾಕ್ಷಾಚ್ಛೈವಂ ಸರ್ವಾರ್ಥಸಾಧಕಂ ॥೫೦॥
(ಸಿ. ಪರಿ. ೪)

॥ ರೇಣುಕ ಉವಾಚ ॥

ಅಥಾಗಸ್ತ್ಯವಚಃ ಶ್ರುತ್ವಾ ರೇಣುಕೋ ಗಣನಾಯಕಃ ।
ಧ್ಯಾತ್ವಾ ಕ್ಷಣಂ ಮಹಾದೇವಂ ಸಾಂಬಮಾಹ ಸಮಾಹಿತಃ ॥
ಅಗಸ್ತ್ಯ ಮುನಿಶಾರ್ದೂಲ ಸಮಸ್ತಾಗಮಪಾರಗ ।
ಶಿವಜ್ಞಾನಕರಂ ವಕ್ಷ್ಯೇ ಸಿದ್ಧಾಂತಂ ಶ್ರುಣು ಸಾದರಂ ॥
(ಸಿ. ಪರಿ. ೫)

ಈ ರೀತಿಯಾಗಿ ಅಗಸ್ತ್ಯಮಹರ್ಷಿಗಳು ಶ್ರೀರೇಣುಕಾಚಾರ್ಯರನ್ನು ಪ್ರಾರ್ಥಿಸಿಕೊಂಡ ಮೇಲೆ, ಶ್ರೀರೇಣುಕಭಗವತ್ಪಾದರು ಅವರಿಗೆ ಶಿವ ಸಿದ್ಧಾಂತವನ್ನು ಉಪದೇಶಿಸಿದರು. ಸಿದ್ಧಾಂತಶಿಖಾಮಣಿಯ ತುಂಬೆಲ್ಲ ಇದೇ ವಿಷಯವು ಇರುವುದು. ಆದುದರಿಂದಲೇ ಈ ಗ್ರಂಥವು "ರೇಣು ಕಾಗಸ್ತ್ಯ ಸಂವಾದ" ಎಂಬ ಹೆಸರಿನಿಂದಲೂ ಜಗತ್ತಿನಲ್ಲಿ ಪ್ರಖ್ಯಾತ ವಾಗಿರುವದು. ಈ ರೀತಿ ಲೋಕವಿಖ್ಯಾತವಾಗಿರುವ ವಿಷಯವನ್ನು ರಾಯರು ತಲೆಕೆಳಗಾಗಿ ಮಾಡಿಬಿಟ್ಟಿದ್ದಾರೆ. ಹೀಗೆ ಯದ್ವಾತದ್ವಾ ಬರೆದರೆ ಜನರು ಏನೆಂದಾರೆಂಬ ಭೀತಿಯಾದರೂ ಇರಬಾರದೇ? ಯಾವ ವಿಷಯ ವನ್ನೂ ಸರಿಯಾಗಿ ನೋಡದೆ ಹೀಗೆ ಮನಬಂದಂತೆ ದುಡುಕಿ ಬರೆಯು ವದು ರಾಯರಿಗೆ ಭೂಷಣವೇ? ವಿಷಯಗಳನ್ನು ಹೀಗೆ ವ್ಯತ್ಯಾಸಮಾಡಿ ಬರೆದು ಮುದ್ರಿಸಿ, ಲೋಕದ ಜನರಿಗೆ ಅಯಥಾರ್ಥಜ್ಞಾನವನ್ನು ಉಂಟು ಮಾಡಿಕೊಡುವದು ಸಾಧುವೇ? ಇವರು ಆ ಪವಿತ್ರಗ್ರಂಥವನ್ನು ಕಣ್ಣಿ ನಿಂದಲೂ ಸಹ ನೋಡದೆ, ಅದರ ಬಗ್ಗೆ ಇಲ್ಲದ್ದೊಂದನ್ನು ಕಲ್ಪಿಸಿ ಬರೆ ದಿರುವದು ಅತ್ಯಂತಖಂಡನೀಯವಾಗಿದೆ. ಇವರ ಇಂಟ್ರಡಕ್ಷನ್ನಿನಲ್ಲಿ ಸಿದ್ಧಾಂತಶಿಖಾಮಣಿಯನ್ನು ರಚಿಸಿದ ಶ್ರೀಶಿವಯೋಗಿಶಿವಾಚಾರ್ಯರ ಹೆಸರೇ ಇಲ್ಲ. ಈಗ್ಗೆ ೩೨೦ ವರ್ಷಗಳ ಪೂರ್ವದಲ್ಲಿ ಅದಕ್ಕೆ ಟೀಕೆಯನ್ನು ಬರೆದಿರುವ ಸೋಸಲೆ ರೇವಣಾರಾಧ್ಯನನ್ನು ಮೂಲಗ್ರಂಥಕಾರನನ್ನಾಗಿ ಮಾಡಿಬಿಟ್ಟಿದ್ದಾರೆ. ಈ ರೀತಿಯಾಗಿ ಇವರು ತಪ್ಪುತಪ್ಪಾಗಿ ಬರೆದಿದ್ದರೂ, ಆ ತಪ್ಪನ್ನು ಒಪ್ಪಿಕೊಳ್ಳುವರೇನು? ಇಲ್ಲ. ಅದನ್ನೇ ಪುನಃ ಸಾಧಿಸಲಿಕ್ಕೆ ಹೋಗುತ್ತಿರುವರು. ಹೀಗೆ ಮಾಡುವದು ರಾಯರಿಗೆ ಎಷ್ಟು ಸರಿಯಲ್ಲ. ಆದರೆ ರಾಯರು ಇತ್ತೀಚೆಗೆ ಸ್ವಲ್ಪ ಎಚ್ಚತ್ತು ಈಗ ಪ್ರಕಟಿಸಿರುವ ಉತ್ತರ ದಲ್ಲಿ ಶಿವಯೋಗಿಶಿವಾಚಾರ್ಯರ ಹೆಸರನ್ನೆತ್ತಿರುವದು ಈ ಮತದ ಸುದೈವವೆಂದೇ ಹೇಳಬೇಕಾಗಿದೆ. ಇವರು ತಮ್ಮ ಉತ್ತರದಲ್ಲಿ —

"ಶಿವಯೋಗಿಯ ಗ್ರಂಥದ ಆಧಾರದ ಮೇಲೆ ರೇವಣಾಚಾರ್ಯರು ರಚಿಸಿದ ಗ್ರಂಥವು ಶ್ರೀಪತಿಪಂಡಿತಾಚಾರ್ಯರಿಗೆ ತಿಳಿದಿತ್ತು."

ಎಂದು ಬೇರೊಂದು ವಿಧವಾದ ಗುಡುಗು ಹಾಕಿದ್ದಾರೆ. ಶಿವಯೋಗಿಯ ಗ್ರಂಥದ ಆಧಾರದಮೇಲೆ ರೇವಣಾಚಾರ್ಯರು ಬರೆದ ಗ್ರಂಥವು ಅದು ವುದೋ ತಿಳಿಯದಾಗಿದೆ. ಆ ಗ್ರಂಥವು ರಾಯರಿಗೆ ಸ್ಪೆಷಲ್ಲಾಗಿ ಕೈಲಾಸ ದಿಂದೇನಾದರೂ ಬಂದಿರಬಹುದೇ? ವೀರಶೈವಮತಗ್ರಂಥಗಳ ಮತ್ತು ಮತಗ್ರಂಥಕಾರರ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೆ, ದುಡುಕಿ ಬರೆಯುವವರ ಬರವಣಿಗೆಯು ಹಣೆಬರಹವೇ ಇಷ್ಟು! ರಾಯರು ತಾವು ಮೊದಲು ಇಂಟ್ರೊಡಕ್ಷನ್ನಿನಲ್ಲಿ ಬರೆದಂತೆ ಈಗಲಾದರೂ ತಮ್ಮ ಉತ್ತರದಲ್ಲಿ "ಸೋಸಲೆ ರೇವಣಾರಾಧ್ಯ" ಎಂದು ಬರೆಯಬೇಕಾಗಿತ್ತು. ಹಾಗೆ ಬರೆ ಯದೆ ಸ್ವಲ್ಪ ಎಚ್ಚರಗೊಂಡು ಬಹಳ ಬುದ್ಧಿವಂತಿಕೆಯಿಂದ ಕೇವಲ "ರೇವಣಾಚಾರ್ಯ" ಎಂದು ಮಾತ್ರ ಬರೆದಿದ್ದಾರೆ. ಕೇವಲ "ರೇವಣಾ ಚಾರ್ಯ" ಎಂದು ಬರೆದರೆ ಎತ್ತಬೇಕತ್ತ ಆರ್ಗ್ಯುಮೆಂಟ್ ಮಾಡಬಹು ದೆಂದು ಯೋಚಿಸಿ, ಲಾಯರ್ ಪಾಯಿಂಟ್ ಹಿಡಿದು ಬರೆದಿರುವಂತೆ ತೋರುತ್ತದೆ. ಆದರೆ ರಾಯರು ಈ ಮೊದಲು ಇಂಟ್ರೊಡಕ್ಷನ್ನಿನಲ್ಲಿ "ಸೋಸಲೆ ರೇವಣಾರಾಧ್ಯ"ನೇ ಮೂಲಗ್ರಂಥಕರ್ತನೆಂದು ೩-೪ ಸಾಲ ಬರೆದು, ಆ ಸೋಸಲೆ ರೇವಣಾರಾಧ್ಯನ ವಂಶಾವಳಿಯನ್ನೂ ಸಹ ಬರೆದಿರು ವದರಿಂದ ಇವರು ತಪ್ಪಿಸಿಕೊಳ್ಳಲಿಕ್ಕೆ ಮಾರ್ಗವೇ ಇರುವದಿಲ್ಲ.

"ಮೊದಲು ತಿಳಿಯದೆ ಗ್ರಂಥಕಾರರ ಹೆಸರುಗಳನ್ನು ತಪ್ಪುತಪ್ಪಾಗಿ ಬರೆದದ್ದಾಯಿತು; ಆದುದರಿಂದ ವೀರಶೈವರಾರೂ ಮನಸ್ಸಿಗೆ ವ್ಯಥೆಯ ನ್ನುಂಟುಮಾಡಿಕೊಳ್ಳಬಾರದು."

ಎಂದು ರಾಯರು ತಮ್ಮ ಉತ್ತರದಲ್ಲಿ ಬರೆದುಬಿಟ್ಟಿದ್ದರೆ ತ ರಗಳೆಯೇ ಇರುತ್ತಿರಲಿಲ್ಲ. ಹಾಗೆ ಮಾಡದೆ ಲಾಯರ್‌ಪಾಯಿಂಟ್ ಉಪ ಯೋಗಿಸಿ, ತಪ್ಪನ್ನು ಸಾಧಿಸಹೋದರೆ ಅದು ಎಂದಾದರೂ ಸಾಧ್ಯವಾ ದೀತೇ? ಆದುದರಿಂದ ರಾಯರು ಆ ಮಾರ್ಗವನ್ನು ಖಂಡಿತವಾಗಿಯೂ ಬಿಟ್ಟುಕೊಟ್ಟು, ಗ್ರಂಥಕಾರರ ಹೆಸರುಗಳನ್ನು ತಪ್ಪಾಗಿ ಬರೆದಿದ್ದೇವೆಂದು

ಒಪ್ಪಿಕೊಳ್ಳಲೇಬೇಕು. ೫-೬ ಕಡೆಗೆ ಮುದ್ರಿತವಾಗಿ ಜಗದ್ವಿಖ್ಯಾತವಾಗಿರುವ ಸಿದ್ಧಾಂತಶಿಖಾಮಣಿಯ ವಿಷಯದಲ್ಲಿಯೇ ಇವರು ಹೀಗೆ ಯದ್ವಾತದ್ವಾ ಬರೆಯುತ್ತಿರುವರೆಂದಮೇಲೆ, ಎಂದೂ ಯಾರೂ ನೋಡದ ಶ್ರೀಕರಭಾಷ್ಯವನ್ನು ರಚಿಸಿರುವ ಶ್ರೀಪತಿಪಂಡಿತರ ಬಗ್ಗೆ ಇವರು ಎಷ್ಟು ವಿರುದ್ಧವಿಷಯಗಳನ್ನು ಬರೆದಿರಬಹುದೆನ್ನುವದನ್ನು ಬೇರೆ ಹೇಳಬೇಕಾಗಿಲ್ಲ. ಇರಲಿ; ರಾಯರು ತಮ್ಮ ಉತ್ತರದಲ್ಲಿ ಸಿದ್ಧಾಂತಶಿಖಾಮಣಿಯ ಕಾಲವು ೨ ಸಾವಿರ ವರ್ಷದ್ದಲ್ಲವೆಂದು ಬರೆದಿದ್ದಾರೆ. ಇವರಿಗೆ ಸಿದ್ಧಾಂತಶಿಖಾಮಣಿಯನ್ನು ಯಾರು ಬರೆದವರೆಂಬುದೂ ಗೊತ್ತಿಲ್ಲ; ಅದರಲ್ಲಿ ಯಾವ ವಿಷಯವಿದೆಯೆಂಬುದೂ ಗೊತ್ತಿಲ್ಲ; ಯಾರಿಗೆ ಯಾರು ಉಪದೇಶಮಾಡಿದರೆಂಬುದೂ ಗೊತ್ತಿಲ್ಲ; ಅಂದಮೇಲೆ ಇವರಿಗೆ ಆ ಗ್ರಂಥದ ಕಾಲವು ಹೇಗೆ ಗೊತ್ತಾಗಬೇಕು? ಬಂಜಸ್ತ್ರೀಯಳಿಗೆ ಪ್ರಸವವೇದನೆಯ ಸ್ವರೂಪವು ಎಂದಾದರೂ ಗೊತ್ತಾದೀತೆ? ಆ ಪವಿತ್ರಗ್ರಂಥದ ಸ್ವರೂಪವನ್ನೇ ಅರಿಯದ ಇವರು, ಆ ಮಹಾಗ್ರಂಥದ ಕಾಲವನ್ನು ಒಪ್ಪಿದರೇನು? ಒಪ್ಪದಿದ್ದರೇನು? ಅದರ ಸನಾತನತ್ವವು ಅದಕ್ಕೆ ಇದ್ದೇ ಇದೆ. ಅಸ್ತು!

ರಾಯರು ಮುಂದೆ ತಮ್ಮ ಉತ್ತರದಲ್ಲಿ—

"ಬಾದರಾಯಣಸೂತ್ರಗಳಿಗೆ ಭಾಷ್ಯಗಳನ್ನು ಬರೆದ ಭಾಸ್ಕರ, ರಾಮಾನುಜ, ಶ್ರೀಕಂಠರ ತರುವಾಯ ಶ್ರೀಪತಿಪಂಡಿತಾಚಾರ್ಯರು ಇದ್ದರೆಂದು ಟಿಪ್ಪಣಕಾರರೇ ಖಂಡಿತವಾಗಿ ಒಪ್ಪಿಕೊಂಡಿದ್ದಾರೆ. ಶ್ರೀಪತಿಪಂಡಿತಾಚಾರ್ಯರು ಇವರೆಲ್ಲರ ಹೆಸರನ್ನೂ ಹೇಳಿರುವದರಿಂದ ಇವರೆಲ್ಲರಿಗಿಂತಲೂ ಈಚಿನವರೆಂಬುದರಲ್ಲಿ ವಾದಕ್ಕೆ ಎಡೆಯೇ ಇಲ್ಲ. ಭೂಮಿಕೆಯಲ್ಲಿ ಕೊಟ್ಟಿರುವ ಶಿಲಾಲೇಖನದ ಪ್ರಕಾರ ಶ್ರೀಕಂಠನು ೧೩ ನೆಯ ಶತಕದ ಅಂತ್ಯದಲ್ಲಿದ್ದನೆಂದು ಗೊತ್ತಾಗಿದೆ. ಅವನ ಗ್ರಂಥದಿಂದ ಅನುವಾದಮಾಡುವ ಶ್ರೀಪತಿಪಂಡಿತಾಚಾರ್ಯರು ೧೪ ನೆಯ ಶತಕದ ಮಧ್ಯಭಾಗದಲ್ಲಿ (೧೩೫೦-೧೪೦೦) ಬದುಕಿರಬೇಕಾಗುತ್ತದೆ. ಭಟ್ಟಭಾಸ್ಕರನ ಗ್ರಂಥದಿಂದ ಶ್ರೀಪತಿಪಂಡಿತಾಚಾರ್ಯರು ವಿಷಯಗಳನ್ನು ತೆಗೆದುಕೊಂಡಿದ್ದಾರೆ. ೧೧೮೧-೧೧೮೩ ರ ವರೆಗೆ ಆಳಿದ ಕಲಚುರಿ ರಾಜನಾದ

ಆಹವಮಲ್ಲನಿಂದ ಭಟ್ಟಭಾಸ್ಕರನು ದಾನವನ್ನು ತೆಗೆದುಕೊಂಡಂತೆ ಕಂಡುಬರು ವದರಿಂದ ಸುಮಾರು ೧೧ಳ೪ ರಲ್ಲಿ ಇದ್ದಿರಬಹುದು."

ಎಂದು ಬರೆದಿದ್ದಾರೆ. ರಾಯರು ಬರೆದಿರುವಂತೆ ಶ್ರೀಪತಿಪಂಡಿತಾಚಾರ್ಯರು ಭಟ್ಟಭಾಸ್ಕರ - ರಾಮಾನುಜ-ಶ್ರೀಕಂಠರಿಗಿಂತ ಈಚಿನವರೆಂದು ಎಲ್ಲರೂ ಒಪ್ಪಿಕೊಳ್ಳುವರು. ಇದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ರಾಯರು ಭಟ್ಟಭಾಸ್ಕರ ಮತ್ತು ಶ್ರೀಕಂಠರ ಕಾಲವನ್ನು ಮಾತ್ರ ತಪ್ಪಾಗಿ ಗ್ರಹಿಸಿದ್ದಾರೆ. ಇದೇ ರಾಯರು ತಪ್ಪುದಾರಿಯಲ್ಲಿ ಹೋಗಲಿಕ್ಕೆ ಮುಖ್ಯ ಕಾರಣವಾಗಿದೆ.

## ರಾಯರು ಶಾಸನಗಳಿಗೆ ಅರ್ಥಮಾಡುವ ವಿಚಿತ್ರಪದ್ಧತಿ.

ರಾಯರು ೯ ನೆಯ ಶತಮಾನದಲ್ಲಿ ಯಜುರ್ವೇದದ ಮೇಲೆ ಭಾಷ್ಯವನ್ನು ಬರೆದಿರುವ ಭಟ್ಟಭಾಸ್ಕರನು ೧೨ ನೆಯ ಶತಮಾನದಲ್ಲಿದ್ದ ನೆಂದು ಸಾಧಿಸುವುದಕ್ಕೋಸ್ಕರ ಹೋಗಿ, ಸ್ವಲ್ಪ ಹೆಚ್ಚುಕಡಿಮೆಯಾಗಿರುವ ಇದೇ ಮಾದರಿಯ ಒಬ್ಬನ ಹೆಸರಿನ ಶಾಸನವನ್ನು ಹುಡುಕಿ, ೧೨ ನೆಯ ಶತಮಾನದಲ್ಲಿದ್ದ ಆಹವಮಲ್ಲರಾಜನು ಈ ಭಟ್ಟಭಾಸ್ಕರನಿಗೆ ದಾನ ಮಾಡಿದ ವಿಷಯವು ಶಾಸನದಲ್ಲಿರುವದರಿಂದ, ಭಟ್ಟಭಾಸ್ಕರನು ೧೨ ನೆಯ ಶತಮಾನದಲ್ಲಿದ್ದನೆಂದು ನಿರ್ಣಯಿಸಿಬಿಟ್ಟಿದ್ದಾರೆ. ಇವರು ಹೇಳುವ ಶಾಸನ ದಲ್ಲಿ "**ಭಟ್ಟಭಾಸ್ಕರ**" ಎಂಬ ಹೆಸರೇ ಇರುವದಿಲ್ಲ. "**ಭಾಸ್ಕರಭಟ್ಟೋಪಾಧ್ಯಾಯ**" ಎಂಬವನ ಹೆಸರು ಇರುತ್ತದೆ. ಅವನ ತಂದೆತಾಯಿಗಳು ಇಟ್ಟಿರುವ ಈ ಹೆಸರನ್ನು **ಭಟ್ಟಭಾಸ್ಕರ**ನಿಗೆ ಸಂಬಂಧಿಸುವದಕ್ಕೋಸ್ಕರ ರಾಯರು ಘನವಾದ ಬುದ್ಧಿಯನ್ನು ಖರ್ಚುಮಾಡಿದ್ದಾರೆ. ಅದೇನೆಂದರೆ— "ಭಾಸ್ಕರಭಟ್ಟೋಪಾಧ್ಯಾಯ" ಎಂಬ ಹೆಸರಿನಲ್ಲಿರುವ **ಉಪಾಧ್ಯಾಯ** ಶಬ್ದಕ್ಕೆ "ಟೀಚರ್" ಎಂದು ಅರ್ಥಮಾಡಿಕೊಳ್ಳಬೇಕೆಂದು ಹೇಳಿ, ಉಪಾಧ್ಯಾಯಶಬ್ದವನ್ನು ವನವಾಸಕ್ಕೆ ಕಳುಹಿಸಿದ್ದಾರೆ. ಆ ಶಬ್ದವು

ವನವಾಸಕ್ಕೆ ಹೋದಮೇಲೆ " **ಭಾಸ್ಕರಭಟ್ಟ** " ಎಂದು ಇಷ್ಟೇ ಉಳಿಯು ವದು. ಭಾಸ್ಕರಭಟ್ಟ-ಭಾಸ್ಕರಭಟ್ಟ ಎಂದು ಮೊದಲು ಅನ್ನುತ್ತ ಅನ್ನುತ್ತ, ಕಾಲಕ್ರಮದಲ್ಲಿ ಮುಂದಿರುವ " **ಭಟ್ಟ** " ಶಬ್ದವು " **ಭಾಸ್ಕರ** " ಶಬ್ದದ ಹಿಂದಕ್ಕೆ ಶೇರಿ " **ಭಟ್ಟಭಾಸ್ಕರ** " ಎಂದು ಆಗಿರುವದಂತೆ! ಆದುದರಿಂದ ಈತನು ೧೨ ನೆಯ ಶತಮಾನದಲ್ಲಿಯೇ ಇದ್ದನೆಂದು ಸಿದ್ಧಾಂತವನ್ನು ಮಾಡಿಬಿಟ್ಟಿರುವರು. ಇವರು ಈ ವಿಧವಾಗಿ ಅರ್ಥಮಾಡಿರುವದನ್ನು ನೋಡಿದರೆ ನಗೆ ಬರುತ್ತದೆ. ಇವರು ಅರ್ಥಮಾಡಿದಂತೆಯೇ ಮನುಷ್ಯರ ಹೆಸರುಗಳಿಗೆ ಅರ್ಥಮಾಡುತ್ತ ಹೋದರೆ, ಒಬ್ಬರ ಜಮೀನು ಮತ್ತೊಬ್ಬರ ಪಾಲಾಗಿ ಹೋಗಬೇಕಾದೀತು? ಒಬ್ಬರ ಹೆಸರಿನಿಂದ ಬ್ಯಾಂಕಿನಲ್ಲಿಟ್ಟಿರುವ ದುಡ್ಡನ್ನು ಬೇರೊಬ್ಬರು ಅನುಭವಿಸಬೇಕಾದೀತು? ಈ ರೀತಿಯಾಗಿ ಬರೆದಿರುವವರು " **ಹಯವದನರಾಯ** " ರಷ್ಟೆ! ಕಾಲಕ್ರಮದಲ್ಲಿ ಇವರ ಹೆಸರಿನಲ್ಲಿರುವ ಶಬ್ದಗಳು ಹಿಂದುಮುಂದಾಗಿ " **ವದನಹಯರಾಯ** " ರೆಂದು ಆಗಬಹುದೇನು? ಹೀಗೆ ಆಗಬಹುದೆಂದು ರಾಯರು ಒಪ್ಪುವರೋ? ಹೇಳಲಿ. ಸುಮ್ಮನೆ ಇಲ್ಲದ್ದೊಂದನ್ನು ಸಾಧಿಸುವುದಕ್ಕೋಸ್ಕರ ಈ ರೀತಿ ಯಾಗಿ ಅರ್ಥಮಾಡುವದು ರಾಯರಿಗೆ ಎಷ್ಟು ಸರಿಯಾದುದಲ್ಲ. ಶ್ರೀಪತಿ ಪಂಡಿತರು ಇತ್ತೀಚಿನವರೆಂದು ಸಾಧಿಸುವದಕ್ಕೋಸ್ಕರ ಪ್ರತಿಯೊಂದು ಶಾಸನಗಳಿಗೂ ಹೀಗೆ ಅಪಾರ್ಥವನ್ನು ಕಲ್ಪಿಸುವದರಿಂದ ಇವರಿಗೆ ಬರುವ ಪುರುಷಾರ್ಥವೇನೆಂಬುದು ಯಾರಿಗೂ ತಿಳಿಯದಾಗಿದೆ.

## ಭಟ್ಟಭಾಸ್ಕರಾಚಾರ್ಯನ ಕಾಲ.

ರಾಯರು ಭಟ್ಟಭಾಸ್ಕರನ ವಿಷಯವನ್ನು ಎಷ್ಟು ಸರಿಯಾಗಿ ತಿಳಿದು ಕೊಂಡಿರುವದಿಲ್ಲ. ಏಕೆಂದರೆ—ಇವರು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿರುವ "**ಭಾಸ್ಕರನು**" ಬೇರೆ; ವೇದೋಪನಿಷತ್ತುಗಳಿಗೆ ಭಾಷ್ಯವನ್ನು ಬರೆದಿರುವ " **ಭಟ್ಟಭಾಸ್ಕರನು** " ಬೇರೆ ಎಂದು ಬಲವಾಗಿ ನಂಬಿದ್ದಾರೆ.

ಆದುದರಿಂದಲೇ ಇವರು ತಮ್ಮ ಇಂಟ್ರೊಡಕ್ಷನ್ನಿನಲ್ಲಿ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿರುವ ಭಾಸ್ಕರಾಚಾರ್ಯನ ಕಾಲವನ್ನು ಕ್ರಿ.ಶ. ೧೦೦೦ ಎಂದೂ, ವೇದೋಪನಿಷತ್ತುಗಳಿಗೆ ಭಾಷ್ಯವನ್ನು ಬರೆದಿರುವ ಭಟ್ಟ ಭಾಸ್ಕರಾಚಾರ್ಯನ ಕಾಲವನ್ನು ಕ್ರಿ. ಶ. ೧೧೮೩ ಎಂದೂ ಬರೆದು, ಒಬ್ಬ ಮನುಷ್ಯನನ್ನೇ ಎರಡು ಭಾಗವನ್ನಾಗಿ ಮಾಡಿಬಿಟ್ಟಿದ್ದಾರೆ. ಇವರು ಹೋಗಿರುವ ಮಾರ್ಗವು—"ರಘುವಂಶವನ್ನು ಬರೆದಿರುವ ಕಾಲಿದಾಸನೇ ಬೇರೆ; ಶಾಕುಂತಲವನ್ನು ಬರೆದಿರುವ ಕಾಲಿದಾಸನೇ ಬೇರೆ." ಎಂದು ವಾದಿಸುವವರ ಮಾರ್ಗದಂತೆ ಹಾಸ್ಯಾಸ್ಪದವಾಗಿದೆ. ವೇದಗಳಿಗೂ, ಉಪನಿಷತ್ತುಗಳಿಗೂ, ಬ್ರಹ್ಮಸೂತ್ರಗಳಿಗೂ ಭಾಷ್ಯಗಳನ್ನು ಬರೆದು ಜಗದ್ವಿಖ್ಯಾತನಾಗಿರುವ ಮಹಾತ್ಮನು ಒಬ್ಬನೇ ಒಬ್ಬನಾಗಿದ್ದಾನೆ. ಆದುದರಿಂದಲೇ ಆ ಮಹಾತ್ಮನ ದಿವ್ಯನಾಮವು ಇಂದಿನವರೆಗೂ ಭರತಖಂಡದಲ್ಲಿ ಅತ್ಯುಜ್ಜ್ವಲವಾಗಿ ಪ್ರಕಾಶಿಸುತ್ತಿರುವದು. ಇವರಿಬ್ಬರೂ ಬೇರೆಬೇರೆಯಾಗಿರದೆ ಒಬ್ಬನೇ ಆಗಿರುವನೆಂಬುದು ಮುಂದೆ ನಾನು ಪ್ರತಿಪಾದಿಸುವ ವಿಷಯಗಳಿಂದ ಸ್ಪಷ್ಟವಾಗುವದು. ಇದನ್ನು ರಾಯರು ಪರಿಶೀಲಿಸಬೇಕು. ಭಟ್ಟಭಾಸ್ಕರನು ಚತುರ್ವೇದಗಳ ಮೇಲೂ, ದಶೋಪನಿಷತ್ತುಗಳಮೇಲೂ, ಬ್ರಹ್ಮಸೂತ್ರಗಳ ಮೇಲೂ ಭಾಷ್ಯಗಳನ್ನು ರಚಿಸಿರುವನು. ಈತನು ರಚಿಸಿದ ವೇದಭಾಷ್ಯಗಳಲ್ಲಿ "**ಯಜುರ್ವೇದ**"ದ ಮೇಲೆ ಬರೆದಿರುವ ಭಾಷ್ಯವು ಮಾತ್ರ ಸದ್ಯಃ ಉಪಲಬ್ಧವಾಗಿದ್ದು, ಮೈಸೂರು ಗವರ್ನಮೆಂಟಿನವರಿಂದ ಮುದ್ರಿಸಲ್ಪಟ್ಟಿದೆ. **ಬ್ರಹ್ಮಸೂತ್ರಭಾಷ್ಯವೂ** ಸಹ ಮುದ್ರಿತವಾಗಿದೆ. **ಉಪನಿಷದ್ಭಾಷ್ಯವು** ಎಲ್ಲಿಯೂ ಮುದ್ರಿತವಾಗಿಲ್ಲ. ಈತನ ಲೇಖನ ಶೈಲಿಯು ಬಹುಗಂಭೀರವಾಗಿದ್ದು, ಅತ್ಯಂತ ಮಿತವಾಗಿರುವದು. ಈತನ ಬರವಣಿಗೆಯಲ್ಲಿ ಹೆಚ್ಚಿನ ರಗಳೆಯು ಇರುವುದಿಲ್ಲ. ಆದುದರಿಂದಲೇ ಈತನ ಸಾರಭೂತವಾದ ಬರವಣಿಗೆಯು ಸಕಲಮತಗಳ ಪಂಡಿತರ ಮನಸ್ಸನ್ನು ಆಕರ್ಷಿಸುತ್ತಿರುವದು. ಈತನು ಬರೆದಿರುವ **ವೇದಭಾಷ್ಯ** ಮತ್ತು ಬ್ರಹ್ಮ

ಸೂತ್ರಭಾಷ್ಯಗಳೆರಡನ್ನೂ ಹತ್ತಿರವಲ್ಲಿಟ್ಟುಕೊಂಡು ನೋಡಿದರೆ, ಅಗ್ಗಿ ಲೇಖನಶೈಲಿಯು ಗೊತ್ತಾಗುವದು. ಈ ಮಹಾತ್ಮನು ಬರೆದಿರುವ ಬ್ರಹ್ಮಸೂತ್ರಭಾಷ್ಯವನ್ನು ಬನಾರಸ್ ಗವರ್ನಮೆಂಟ್ ಸಂಸ್ಕೃತ ಕಾಲೇಜಿನ ಲೈಬ್ರರಿಯನ್ನರಾದ ಪಂಡಿತ ವಿಂಧ್ಯೇಶ್ವರೀಪ್ರಸಾದ ದ್ವಿವೇದಿಯವರು ಬಹು ಕಷ್ಟಪಟ್ಟು ಹುಡುಕಿ, ೧೯೧೫ ನೆಯ ಇಸವಿಯಲ್ಲಿ ಚೌಖಂಬಾಸಂಸ್ಕೃತಗ್ರಂಥಮಾಲೆಯಲ್ಲಿ ಮುದ್ರಿಸಿರುವರು. ಈ ಮಹಾಶಯರು ಆ ಭಾಷ್ಯಕ್ಕೆ ಬರೆದಿರುವ ಪೀಠಿಕೆಯ ೩-೪ ನೆಯ ಪುಟದಲ್ಲಿ—

"ಭಟ್ಟಭಾಸ್ಕರೋ ವೇದಾಂತವಿದ್ಯಾನಿಪುಣಃ ಕಶ್ಚಿದಾಸೀದಿತಿ ತು ನ್ಯಾಯಮೀಮಾಂಸಾವೇದಾಂತಗ್ರಂಥೇಷು ತತ್ರ ತತ್ರ ವೇದಾಂತಭಾಸ್ಕರನಾಮ್ನಾ ಭಟ್ಟಭಾಸ್ಕರನಾಮ್ನಾ ವಾ ತನ್ಮತೋಪನ್ಯಾಸಾದೈತಿಹ್ಯೇನ ಪ್ರಮಾಣೇನ ನಿಶ್ಚಿತಂ ಭವತಿ"

೯ ನೆಯ ಪುಟದಲ್ಲಿ—

"ಅಯಂ ಶಾರೀರಕಸೂತ್ರಭಾಸ್ಕರೋ ಭಟ್ಟಭಾಸ್ಕರಾಚಾರ್ಯಸ್ತು ಭೇದಾಭೇದವಾದೀ ಮುಖ್ಯತಯಾ ಶಂಕರಾಚಾರ್ಯಮತಖಂಡನಾಯ ಭಾಷ್ಯಂ ಪ್ರಣೀತವಾನ್."

ಈ ರೀತಿಯಾಗಿ ಬರೆದು, ಒಬ್ಬನೇ "ಭಾಸ್ಕರ—ಭಟ್ಟಭಾಸ್ಕರ" ಎಂಬ ಎರಡು ಹೆಸರುಗಳಿಂದ ಅನೇಕ ಶಾಸ್ತ್ರಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿರುವನೆಂದು ಸ್ಪಷ್ಟಪಡಿಸಿದ್ದಾರೆ.

ಜಗದ್ವಿಖ್ಯಾತರಾಗಿರುವ ಭಟ್ಟೋಜಿದೀಕ್ಷಿತರೂ ಸಹ ತಮ್ಮಿಂದ ಬರೆಯಲ್ಪಟ್ಟಿರುವ ವೇದಾಂತತತ್ತ್ವವಿವೇಕಟೀಕಾವಿವರಣದಲ್ಲಿ— "ಭಟ್ಟಭಾಸ್ಕರಸ್ತು ಭೇದಾಭೇದಸಿದ್ಧಾಂತವಾದೀ" ಎಂದು ಬರೆದಿದ್ದಾರೆ. ಇದರಿಂದ ಬ್ರಹ್ಮಸೂತ್ರಗಳ ಮೇಲೆ ಭೇದಾಭೇದಸಿದ್ಧಾಂತ

ಪರವಾಗಿ ಭಾಷ್ಯವನ್ನು ಬರೆದವನು ಭಟ್ಟಭಾಸ್ಕರನೇ ಎಂಬುದು ಸ್ಪಷ್ಟವಾಗಿ ಕಂಡುಬರುವದು.

**ಶ್ರೀಕಂಠಶಿವಾಚಾರ್ಯರು** ಬರೆದಿರುವ ಬ್ರಹ್ಮಸೂತ್ರಭಾಷ್ಯಕ್ಕೆ **ಅಪ್ಪಯ್ಯದೀಕ್ಷಿತರು "ಶಿವಾರ್ಕಮಣಿದೀಪಿಕಾ"** ಎಂಬ ವ್ಯಾಖ್ಯಾನವನ್ನು ಬರೆದಿರುವರಷ್ಟೆ! **"ಉಭಯೋಽಪಿ ಭೇದೇನೈನಮಧೀಯತೇ"** (೧-೨-೨೧) ಎಂಬ ಬ್ರಹ್ಮಸೂತ್ರಕ್ಕೆ ಶ್ರೀಕಂಠಶಿವಾಚಾರ್ಯರು ಬರೆದಿರುವ ಭಾಷ್ಯದಮೇಲೆ ಅಪ್ಪಯ್ಯದೀಕ್ಷಿತರು ತಮ್ಮ ವ್ಯಾಖ್ಯಾನದಲ್ಲಿ – **"ತಸ್ಯಾತ್ಮಶಬ್ದಸ್ಯಾನಂದಮಯಾಧಿಕರಣಭಾಷ್ಯೇ ಭಟ್ಟಭಾಸ್ಕರೀಯೇ ತೈತ್ತಿರೀಯಾರಣ್ಯಕಭಾಷ್ಯೇ ಚ ಸುಪ್ರಸಿದ್ಧತ್ವಾತ್"** ಎಂಬ ವಾಕ್ಯವನ್ನು ಬರೆದಿರುವುದರಿಂದ, ಭಟ್ಟಭಾಸ್ಕರಾಚಾರ್ಯರೇ ತೈತ್ತಿರೀಯಾರಣ್ಯಕಕ್ಕೂ, ಬ್ರಹ್ಮಸೂತ್ರಗಳಿಗೂ ಭಾಷ್ಯವನ್ನು ಬರೆದಿರುವರೆಂಬ ವಿಷಯವು ಚಿಕ್ಕಮಕ್ಕಳಿಗೂ ಕೂಡ ಸ್ಪಷ್ಟವಾಗಿ ತಿಳಿದುಬರುವುದು.

ಇದಲ್ಲದೆ ಭಟ್ಟಭಾಸ್ಕರನು – **"ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಯಥೇತಮನೇವಂ"** (೩—೧—೮) ಎಂಬ ಬ್ರಹ್ಮಸೂತ್ರಕ್ಕೆ ಭಾಷ್ಯವನ್ನು ಬರೆಯುವ ಸಂದರ್ಭದಲ್ಲಿ—**"ಛಾಂದೋಗ್ಯೇ ಚಾಯಮೇವಾರ್ಥೋಽಸ್ಮಾಭಿಃ ಪ್ರದರ್ಶಿತಃ"** ಎಂದು ಬರೆದಿರುವುದನ್ನು ನೋಡಿದರೆ, ಈತನೇ ವೇದಶಾಖೆಗಳಿಗೂ ಭಾಷ್ಯವನ್ನು ಬರೆದಿರುವನೆಂಬುದು ಸ್ಪಷ್ಟವಾಗುತ್ತದೆ. ಸ್ವತಃ ಭಾಷ್ಯಕಾರನೇ ಈ ವಿಧವಾದ ವ್ಯಾಖ್ಯಾನವನ್ನು ಬರೆದಿರುವುದನ್ನು ನೋಡಿದರೆ, ಶ್ರುತಿ ಮತ್ತು ಸೂತ್ರಗಳಿಗೆ ಭಾಷ್ಯವನ್ನು ಈತನೇ ಬರೆದಿರುವನೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಇದಲ್ಲದೆ ಈ ರಾಯರು ಶೋಧಿಸಿ ಮುದ್ರಿಸಿರುವ ಶ್ರೀಕರಭಾಷ್ಯದಲ್ಲಿಯೇ, ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿರುವವನು "ಭಟ್ಟಭಾಸ್ಕರ"ನೆಂದೇ ಅನೇಕ ಕಡೆಯಲ್ಲಿ ದೊರೆಯುತ್ತದೆ.

" ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ " (೧—೧—೨೦) ಎಂಬ ಸೂತ್ರಕ್ಕೆ ಶ್ರೀಪತಿಪಂಡಿತರು ಭಾಷ್ಯವನ್ನು ಬರೆಯುವ ಸಂದರ್ಭದಲ್ಲಿ—ವೈದಿಕಮೀಮಾಂಸಾಕರ್ತೃಭಿಃ ಭಟ್ಟಭಾಸ್ಕರಾದಿಪೂರ್ವಾಚಾರ್ಯೈಃ ಸ್ವಸಿದ್ಧಾಂತಸ್ಥಾಪನಾವಸರೇ ಪೂರ್ವಪಕ್ಷಸ್ಯಾಪ್ಯಯೋಗ್ಯತ್ವೇನೋಪೇಕ್ಷಿತತ್ವಾತ್ " ಎಂದು ಬರೆದಿರುವರು.

" ಉತ್ಪತ್ತೇರಸಂಭವಾತ್ " (೨-೨-೪೨) ಎಂಬ ಸೂತ್ರಭಾಷ್ಯದಲ್ಲಿ—" ತಥಾ ಶಂಕರ ಭಟ್ಟಭಾಸ್ಕರಾದಿವೈದಿಕೈರಪಿ ಭೇದಾಭೇದಮತಸ್ಯೈವ ಪಾರಮಾರ್ಥಿಕತ್ವೇನ ವ್ಯವಸ್ಥಾಪನಾತ್ " ಎಂದು ಬರೆದಿರುವರು.

ಇದರಿಂದ ಭಟ್ಟಭಾಸ್ಕರನೇ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿರುವನೆಂಬುದು ಸ್ಪಷ್ಟವಾಗುತ್ತದೆ. ರಾಯರು ತಾವು ಶೋಧಿಸಿದ ಭಾಷ್ಯದಲ್ಲಿಯೇ ಈ ವಿಧವಾದ ವಾಕ್ಯಗಳಿರುವದನ್ನು ಹೇಗೆ ನೋಡಲಿಲ್ಲವೋ ತಿಳಿಯದಾಗಿದೆ. ರಾಯರು ಈ ವಾಕ್ಯಗಳನ್ನು ನೋಡಿಲ್ಲವಂತಲ್ಲ; ನೋಡಿರಬಹುದೆಂಬುದಕ್ಕೆ, ಇವರು " ಉತ್ಪತ್ತೇರಸಂಭವಾತ್ " (೨—೨—೪೨) ಎಂಬ ಸೂತ್ರಭಾಷ್ಯದಲ್ಲಿ " ತಥಾ ಶಂಕರ ಭಟ್ಟಭಾಸ್ಕರಾದಿವೈದಿಕೈರಪಿ " ಎಂಬ ವಾಕ್ಯದಲ್ಲಿರುವ " ಭಟ್ಟ " ಶಬ್ದವನ್ನು ಹಿಂದಿನ " ಶಂಕರ " ಶಬ್ದಕ್ಕೆ ಸೇರಿಸಿ, " ಶಂಕರಭಟ್ಟ-ಭಾಸ್ಕರ " ಎಂದು ಮುದ್ರಿಸಿದ್ದಾರೆ. ಆಹಾ! ಭಾಷ್ಯಶೋಧವೆಂದರೆ ಇದಕ್ಕಿನ್ನ ಬೇಕು! ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿರುವ " ಶಂಕರಭಟ್ಟ "ನು ಆವನಾವನೋ? ಅಥವಾ ರಾಯರು " ಶಂಕರಾಚಾರ್ಯ " ರನ್ನೇ " ಶಂಕರಭಟ್ಟ " ರನ್ನಾಗಿ ಮಾಡಿರುವರೋ ಏನೋ? ಯಾರಿಗೂ ತಿಳಿಯದಾಗಿದೆ. ಇದಾವರೂ " ಭಾಸ್ಕರಭಟ್ಟೋಪಾಧ್ಯಾಯ "ನನ್ನು " ಭಟ್ಟಭಾಸ್ಕರ " ನನ್ನಾಗಿ ಮಾಡಲು ಪ್ರಯತ್ನಪಟ್ಟಂತೆಯೇ ಹಾಸ್ಯಾಸ್ಪದವಾಗಿದೆ. ಮೇಲಿನ ವಾಕ್ಯದಲ್ಲಿ ನಿಜವಾಗಿ " ಶಂಕರ " ಶಬ್ದ ಇರಬಾರದು. ಏಕೆಂದರೆ—

ಶಂಕರಾಚಾರ್ಯರು ಭೇದಾಭೇದವಾದಿಗಳಲ್ಲ. "**ಮಧ್ವ**" ಶಬ್ದವು ಮಧ್ಯದಲ್ಲಿ ಸೇರಿರುವಂತೆ, ಇಲ್ಲಿಯೂ "**ಶಂಕರ**" ಶಬ್ದವು ಮಧ್ಯದಲ್ಲಿ ಸೇರಿಹೋಗಿದೆ. ಇದರಂತೆಯೇ ಈ ಭಾಷ್ಯದಲ್ಲಿ ಅನೇಕಕಡೆಗೆ ವಿರುದ್ಧ ಪದಗಳು ಸೇರಿಹೋಗಿವೆ. ಬಹುಪುರಾತನವಾದ ಈ ಮಹಾಭಾಷ್ಯವನ್ನು ಇಲ್ಲಿಯವರೆಗೂ ಯಾರೂ ಸರಿಯಾಗಿ ಶೋಧಿಸದೆ ಇರುವದೂ, ಈ ಭಾಷ್ಯವು ಪಠನಪಾಠನಾದಿಗಳಲ್ಲಿ ಬಳಕೆಯಲ್ಲಿ ಇಲ್ಲದಿರುವದೂ ಈ ವಿಧವಾದ ಅನೇಕದೋಷಗಳು ಸೇರುವದಕ್ಕೆ ಮುಖ್ಯಕಾರಣವಾಗಿದೆ. ಇರಲಿ; ಇಲ್ಲಿಯವರೆಗೆ ನಾನು ಪ್ರತಿಪಾದಿಸಿದ ವಿಷಯಗಳಿಂದ ವೇದಗಳಿಗೂ ಬ್ರಹ್ಮಸೂತ್ರಗಳಿಗೂ ಭಾಷ್ಯವನ್ನು ಬರೆದ ಮಹಾತ್ಮನು ಒಬ್ಬನಲ್ಲದೆ ಬೇರೆಬೇರೆಯಾಗಿರುವದಿಲ್ಲವೆಂಬುದು ಸಿದ್ಧಾಂತವಾಗುವದು. ನಿಜಸ್ಥಿತಿಯು ಈ ರೀತಿಯಾಗಿದ್ದರೂ, ಇದನ್ನೆಲ್ಲ ರಾಯರು ತಿಳಿದುಕೊಳ್ಳದೆ ಒಬ್ಬನನ್ನೇ ಇಬ್ಬರನ್ನಾಗಿ ಮಾಡಿ, ಅವರವರ ಕಾಲವನ್ನು ವ್ಯತ್ಯಸ್ತವಾಗಿ ಬರೆದು, ಯಾವ ದೇಶದ ಶಾಸನದಲ್ಲಿಯೋ ದೊರತ "ಭಾಸ್ಕರಭಟ್ಟೋಪಾಧ್ಯಾಯ" ಎಂಬ ಹೆಸರನ್ನು ಸಂಗ್ರಹಿಸಿ, ಅವನ ಹೆಸರನ್ನು ತಲೆಕೆಳಗಾಗಿ ತಿರುಗಿಸಿ, ಅವನನ್ನು ಭಟ್ಟಭಾಸ್ಕರನನ್ನಾಗಿ ಮಾಡಿ, ಇವನು ಆಹವಮಲ್ಲನಿಂದ ದಾನತೆಗೆದುಕೊಂಡಿರುವದರಿಂದ, ಭಟ್ಟಭಾಸ್ಕರನು ೧೨ ನೆಯ ಶತಮಾನದಲ್ಲಿದ್ದನೆಂದು ಬರೆದು ಮಹಾಜನಗಳಿಗೆಲ್ಲ ಅಯಥಾರ್ಥಜ್ಞಾನವನ್ನುಂಟು ಮಾಡಿಬಿಟ್ಟಿರುವರು. ರಾಯರಲ್ಲಿ ಸಂಸ್ಕೃತಪಾಂಡಿತ್ಯವು ಸರಿಯಾಗಿಲ್ಲದಿರುವದರಿಂದ, ಪ್ರಾಚೀನಗ್ರಂಥಗಳನ್ನು ಕೂಲಂಕಷವಾಗಿ ಶೋಧಿಸಲು ಇವರಿಗೆ ಶಕ್ತಿಯು ಸಾಲದಾಗಿದೆ. ಆದುದರಿಂದ ಯಾರೋ ಇಂಗ್ಲೀಷಿನಲ್ಲಿ ತಪ್ಪುತಪ್ಪಾಗಿ ಬರೆದಿರುವದನ್ನೇ ಕಾಪಿಮಾಡಿ, ಹೀಗೆ ಬರೆಯುವಂತೆ ತೋರುತ್ತದೆ. ಇರಲಿ;

ಇನ್ನು ಇವರು ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ಬರೆದಿರುವ ಭಾಸ್ಕರಾಚಾರ್ಯರ ಕಾಲವು ಕ್ರಿ.ಶ. ೧೦೦೦ ಎಂದು ಬರೆದಿರುವರು.

ಅದೂಕೂಡ ತಪ್ಪು. ಏಕೆಂದರೆ — ಕ್ರಿ.ಶ. ೯೮೩ ರಲ್ಲಿದ್ದ ಉದಯನಾಚಾರ್ಯರು ಜಗದ್ವಿಖ್ಯಾತವಾದ ತಮ್ಮ " **ಕುಸುಮಾಂಜಲಿ** " ಎಂಬ ಗ್ರಂಥದಲ್ಲಿ ಈ ಭಟ್ಟಭಾಸ್ಕರಾಚಾರ್ಯರ ಹೆಸರನ್ನು ತೆಗೆದುಕೊಂಡು ಅವರ ಅಭಿಪ್ರಾಯವನ್ನು ಖಂಡಿಸಿದ್ದಾರೆ. ಅಂದಮೇಲೆ ಭಟ್ಟಭಾಸ್ಕರಾಚಾರ್ಯರು ಉದಯನಾಚಾರ್ಯರಿಗಿಂತಲೂ ಪೂರ್ವದವರೆಂದು ಸ್ಪಷ್ಟವಾಗುವದಷ್ಟೆ !

ಉದಯನಾಚಾರ್ಯರು ತಾವು ಬರೆದ " **ಲಕ್ಷಣಾವಲೀ** " ಎಂಬ ಗ್ರಂಥವಲ್ಲಿ—

**ತರ್ಕಾಂಬರಾಂಕ (೯೦೬) ಪಮಿತೇಷ್ವತೀತೇಷು ಶಕಾಂತತಃ ।**
**ವರ್ಷೇಷೂದಯನಶ್ಚಕ್ರೇ ಸುಬೋಧಾಂ ಲಕ್ಷಣಾವಲೀಂ ॥**

ಈ ರೀತಿಯಾಗಿ ಶ್ಲೋಕವನ್ನು ಬರೆದು, ಶಕ ೯೦೬ ನೆಯ ವರ್ಷದಲ್ಲಿ ಈ ಗ್ರಂಥವನ್ನು ಬರೆದೆವೆಂದು ಹೇಳಿಕೊಂಡಿದ್ದಾರೆ. ಇದರಿಂದ ಉದಯನಾಚಾರ್ಯರು ಕ್ರಿ.ಶ. ೯೮೩ ರಲ್ಲಿದ್ದರೆಂದು ಸ್ಪಷ್ಟವಾಗುವದು. ಆದುದರಿಂದ ಭಟ್ಟಭಾಸ್ಕರರು ಇವರಿಗಿಂತ ನೂರಾರು ವರ್ಷಗಳ ಪೂರ್ವದವರೆಂದು ಅರ್ಥಾತ್ ಸಿದ್ಧವಾಗುವದು. ಇದೇ ವಿಷಯವನ್ನೇ ಜಗದ್ವಿಖ್ಯಾತರಾದ **ಡಾ|| ಸರ್. ಎಸ್. ರಾಧಾಕೃಷ್ಣನ್** ರವರು ತಾವು ಬರೆದಿರುವ " **ಇಂಡಿಯನ್ ಫಿಲಾಸಫಿ** " ಎಂಬ ಪುಸ್ತಕದ ೨ ನೆಯ ಭಾಗದ ೬೭೦ ನೆಯ ಪುಟದಲ್ಲಿ—

Bhaskara wrote a commentary on the Brahma Sutra called Bhaskara Bhāshya about 900 A.D. His views are attacked by Udayana in his Kusumanjali (A.D. 980).

ಈ ರೀತಿಯಾಗಿ ಬರೆದು, ಭಾಸ್ಕರಾಚಾರ್ಯರು ಸುಮಾರು ಕ್ರಿ.ಶ. ೯೦೦ ರಲ್ಲಿದ್ದರೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದು ಸರಿಯಾದ ಕಾಲವೆಂದು ಎಲ್ಲರೂ ಒಪ್ಪಬಹುದಾಗಿದೆ. ರಾಯರು ಇತ್ಯಾದಿ ವಿಷಯಗಳನ್ನೆಲ್ಲ ಸರಿಯಾಗಿ ನೋಡದೆ, ಶ್ರೀಪತಿಪಂಡಿತಾರಾಧ್ಯರನ್ನು ಇತ್ತೀಚಿನವರನ್ನಾಗಿ ಮಾಡಬೇಕೆಂಬ ಅಬ್ಬರದಲ್ಲಿ ಬಿದ್ದು, ಪ್ರತಿಯೊಬ್ಬರ ಕಾಲಮಾನವನ್ನೂ ವ್ಯತ್ಯಸ್ತವಾಗಿ ಬರೆದಿರುವದನ್ನು ಎಷ್ಟು ಖಂಡಿಸಿದರೂ ತೀರದಾಗಿದೆ.

## ಶ್ರೀಕಂಠಶಿವಾಚಾರ್ಯರ ಕಾಲ.

ಇನ್ನು **ಶ್ರೀಕಂಠಶಿವಾಚಾರ್ಯರ** ಕಾಲವಿಷಯವನ್ನು ವಿಮರ್ಶಿಸೋಣ! ಶ್ರೀಕಂಠಭಾಷ್ಯವನ್ನು ರಚಿಸಿರುವ ಶ್ರೀಕಂಠಶಿವಾಚಾರ್ಯರು ಕ್ರಿ.ಶ. ೯ನೆಯ ಶತಮಾನದಲ್ಲಿದ್ದ ಭಟ್ಟಭಾಸ್ಕರಾಚಾರ್ಯರಿಗಿಂತ ಸ್ವಲ್ಪ ಈಚಿನವರೆಂದು ಗೊತ್ತಾಗುತ್ತದೆ. ಏಕೆಂದರೆ—ಶ್ರೀಕಂಠಭಾಷ್ಯದಲ್ಲಿ ಕೆಲವು ಕಡೆಗೆ ಭಟ್ಟಭಾಸ್ಕರಾಚಾರ್ಯರು ರಚಿಸಿರುವ ತೈತ್ತಿರೀಯಾರಣ್ಯಕ ಭಾಷ್ಯದ ಪಂಕ್ತಿಗಳೂ, ಬ್ರಹ್ಮಸೂತ್ರಭಾಷ್ಯದ ಪಂಕ್ತಿಗಳೂ ದೊರೆಯುತ್ತವೆ. ಆದುದರಿಂದ ಇವರು ಅವರಿಗಿಂತ ಸ್ವಲ್ಪಕಾಲ ಇತ್ತೀಚಿನವರೆಂದು ಸ್ಪಷ್ಟವಾಗುತ್ತದೆ. ಮದ್ರಾಸ್ ಯೂನಿವರ್ಸಿಟಿ ಪ್ರೊಫೆಸರ್ ಮ|| ರಾ|| **ಎಸ್. ಎಸ್. ಸೂರ್ಯನಾರಾಯಣಶಾಸ್ತ್ರಿಗಳು** ಜಗದ್ವಿಖ್ಯಾತವಾದ ಹಿಂದೀ "ಕಲ್ಯಾಣ" ಪತ್ರಿಕೆಯ ವಿಶೇಷಾಂಕವಾದ "**ಶಿವಾಂಕ**"ದ ೨೪೯ನೆಯ ಪುಟದಲ್ಲಿ "**ಶ್ರೀಕಂಠೀಯಶಿವದರ್ಶನ**" ಎಂಬ ಲೇಖವನ್ನು ಬರೆದಿದ್ದಾರೆ. ಆ ಲೇಖದಲ್ಲಿ ಇವರು ಶ್ರೀಕಂಠಶಿವಾಚಾರ್ಯರು ೧೧ನೆಯ ಶತಮಾನದಲ್ಲಿದ್ದರೆಂದು ಬರೆದಿದ್ದಾರೆ. ರಾಯರು ಆ ಲೇಖವನ್ನು ಓದಿನೋಡಬೇಕು. ಕ್ರಿ. ಶ. ೧೧೫೮ ರಲ್ಲಿದ್ದ ಅಘೋರಶಿವಾಚಾರ್ಯರು ತಮ್ಮಿಂದ ವಿರಚಿತವಾದಿರುವ "**ಮಹೋತ್ಸವವಿಧಿ**" ಎಂಬ ಗ್ರಂಥದ

ಕೊನೆಯ ಅಧ್ಯಾಯದಲ್ಲಿ "ಆಮರ್ದಕಮಠ"ಕ್ಕೆ ತಮಗಿಂತಲೂ ಪೂರ್ವದಲ್ಲಿ ಪರಮೇಶ್ವರಹೃದಯಶಂಕರರೆಂಬವರು ಅಧಿಕಾರಿಗಳಾಗಿದ್ದರೆಂದೂ, ಅವರಿಗಿಂತಲೂ ಪೂರ್ವದಲ್ಲಿ ಧ್ಯಾನಶಿವಾಚಾರ್ಯರೆಂಬವರು ಅಧಿಕಾರಿಗಳಾಗಿದ್ದರೆಂದೂ, ಅವರಿಗಿಂತಲೂ ಪೂರ್ವದಲ್ಲಿ ಶ್ರೀಕಂಠಶಿವಾಚಾರ್ಯರು ಅಧಿಕಾರಿಗಳಾಗಿದ್ದರೆಂದೂ ಬರೆದಿರುವರು. ಇದರಿಂದ ಅಘೋರಶಿವಾಚಾರ್ಯರಿಗೆ ಶ್ರೀಕಂಠಶಿವಾಚಾರ್ಯರು ಮೂರನೆಯ ತಲೆಯವರೆಂದು ಸ್ಪಷ್ಟವಾಗುವುದು. ಒಬ್ಬೊಬ್ಬರಿಗೆ ಕನಿಷ್ಠಪಕ್ಷ ೩೦ ವರ್ಷಗಳಂತೆ ಲೆಖ್ಖ ಹಾಕಿದರೂ ಶ್ರೀಕಂಠಶಿವಾಚಾರ್ಯರು ಅಘೋರಶಿವಾಚಾರ್ಯರಿಗಿಂತ ೯೦ ವರ್ಷಗಳ ಪೂರ್ವದಲ್ಲಿದ್ದರೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಶ್ರೀಕಂಠಶಿವಾಚಾರ್ಯರು ಸುಮಾರು ಕ್ರಿ.ಶ. ೧೦೬೪ ರಲ್ಲಿದ್ದರೆಂದು ಹೇಳಬಹುದಾಗಿದೆ. ಈ ರೀತಿಯಾಗಿರುವ ಇವರ ಕಾಲಮಾನವನ್ನು ರಾಯರು ೧೩ನೆಯ ಶತಮಾನಕ್ಕೆ ಓಡಿಸಿಬಿಟ್ಟಿರುವರು. ಆದುದರಿಂದ ರಾಯರು ಪೂರ್ವಾಪರ ವಿಚಾರಮಾಡದೆ ಬರೆದಿರುವ ಭಟ್ಟಭಾಸ್ಕರ ಮತ್ತು ಶ್ರೀಕಂಠರ ಕಾಲಮಾನವು ಎಷ್ಟೂ ಸರಿಯಾದುದಲ್ಲವೆಂದು ಸರ್ವರೂ ಗಮನಿಸಬೇಕು.

ಇನ್ನು ರಾಮಾನುಜಾಚಾರ್ಯರು ಕ್ರಿ.ಶ. ೧೦೧೭ ರಲ್ಲಿ ಜನ್ಮತಾಳಿದ ವಿಷಯವು ಜಗತ್ಪ್ರಸಿದ್ಧವೇ ಆದೆ. ಆದುದರಿಂದ ಈ ಮೂವರಿಗಿಂತಲೂ, ೧೧ನೆಯ ಶತಮಾನದ ಅಂತ್ಯದಲ್ಲಿದ್ದ ಶ್ರೀಪತಿಪಂಡಿತಾರಾಧ್ಯರು ಈಚಿನವರೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ.

## ರುದ್ರಾಂಬೆಯ ಕಾಲವ್ಯತ್ಯಾಸ.

ಮುಂದೆ ರಾಯರು ತಮ್ಮ ಉತ್ತರದಲ್ಲಿ—

"ಶ್ರೀಪತಿಪಂಡಿತಾಚಾರ್ಯರು ಅಗ್ನಿಯನ್ನು ಬಸ್ನಿಯಮರಕ್ಕೆ ಬಟ್ಟೆಯಿಂದ ಕಟ್ಟಿದ ಕತೆಯನ್ನು ಭೂಮಿಕೆಯ ೯—೧೭ನೆಯ [illegible]

ಈ ಘಟನೆಯು ೧೧೯೯ ರಿಂದ ೧೨೬೦ ರ ವರೆಗೆ ಆಳಿದ ಕಾಕತೀಯ ರಾಜನಾದ ಗಣಪತಿಯ ಮತ್ತು ೧೨೯೫ ರಿಂದ ೧೩೨೩ ರ ವರೆಗೆ ಆಳಿದ ಅವನ ಮಗಳು ರುದ್ರಾಂಬೆಯ ಕಾಲದ ಶಿಲಾಶಾಸನದಿಂದ ಬೆಜವಾಡವೆಂದು ಕರೆಯಲ್ಪಡುವ ವಿಜಯವಾಟಿಕಾಪುರದಲ್ಲಿ ಮಲ್ಲೇಶ್ವರ ದೇವರ ಮುಂದೆ ನಡೆದಂತೆ ತಿಳಿಯಬರುತ್ತದೆ..... ...........ಶ್ರೀಪತಿಪಂಡಿತಾಚಾರ್ಯರು ರಾಣಿ ರುದ್ರಾಂಬೆಯಕಾಲದಲ್ಲಿ (೧೨೯೫–೧೩೨೩) ಆಕೆಯ ಸಮಕಾಲಿಕರಾಗಿ ಹರೆಯದವರಾಗಿದ್ದರು ಎಂದು ಸ್ಪಷ್ಟವಾಗಿ ತೋರುತ್ತದೆ."

ಎಂದು ಬರೆದಿರುವರು. ಈ ಮಹಾಶಯರು ಶ್ರೀಪತಿಪಂಡಿತಾಚಾರ್ಯರ ಕಾಲನಿರ್ಣಯಕ್ಕಾಗಿ ರುದ್ರಾಂಬೆಯ ಕಾಲವನ್ನು ವ್ಯತ್ಯಸ್ತಮಾಡಿರುವದನ್ನು ನೋಡಿ ಇತಿಹಾಸಜ್ಞರೆಲ್ಲರೂ ನಗುತ್ತಿರುವರು. ರಾಯರು ತಮ್ಮ ಉತ್ತರದಲ್ಲಿ ಗಣಪತಿರಾಜನು ಕ್ರಿ.ಶ. ೧೧೯೯ ರಿಂದ ೧೨೬೦ ರ ವರೆಗೆ ಆಳಿದನೆಂದೂ, ೧೨೯೫ ರಿಂದ ೧೩೨೩ ರ ವರೆಗೆ ಅವನ ಮಗಳಾದ ರುದ್ರಾಂಬೆಯು ಆಳಿದಳೆಂದೂ ಬರೆದಿರುವರಷ್ಟೆ! ಆದರೆ ೧೨೬೧ ರಿಂದ ೧೨೯೫ ರ ವರೆಗೆ ಆ ರಾಜ್ಯವನ್ನು ಯಾರು ಆಳಿದರೆಂಬುದನ್ನು ರಾಯರು ತೋರಿಸಿಲ್ಲ. ಬಹುಶಃ ರಾಯರು ಉದಾರಭಾವದಿಂದ ಬಿಟ್ಟಿರುವ ೩೫ ವರ್ಷಗಳ ಕಾಲ ಆ ರಾಜ್ಯವನ್ನು ಭೂತಗಳು ಆಳಿರಬಹುದೆಂದು ತೋರುತ್ತದೆ. ಹೀಗೆ ಬರೆದರೆ ಜನರು ನಕ್ಕಾರೆಂದಾದರೂ ತಿಳಿಯಬಾರದೇ ? ಇವರು ಬರೆದಿರುವ ಕಾಲವು ರುದ್ರಾಂಬೆಯದಲ್ಲ. ಆ ಕಾಲವು ರುದ್ರಾಂಬೆಯ ಮೊಮ್ಮಗನಾದ ಪ್ರತಾಪರುದ್ರನದು. ರಾಯರು ಮಧ್ಯದಲ್ಲಿ ಬಿಟ್ಟಿರುವ ಕಾಲವೇ ರುದ್ರಾಂಬೆಯದು. ರಾಯರು ಮೊಮ್ಮಗನು ಆಳಿದ ಕಾಲವನ್ನು ಅಜ್ಜಿಗೆ ಸಂಬಂಧಿಸಿಬಿಟ್ಟಿದ್ದಾರೆ. ಇದಕ್ಕೇನ್ನಬೇಕು ಇತಿಹಾಸಶೋಧವೆಂದು? ಹೀಗೆಯೇ ಈ ರಾಯರು ಪ್ರತಿಯೊಂದು ವಿಷಯವನ್ನೂ ತಮ್ಮ ಸಂಕಲ್ಪ ಸಾಧನೆಗಾಗಿ ಯದ್ವಾ ತದ್ವಾ ಬರೆದುಬಿಟ್ಟಿದ್ದಾರೆ. ಶ್ರೀಪತಿಪಂಡಿತರ ಕಾಲ ನಿರ್ಣಯಕ್ಕಾಗಿ ಪ್ರಸಿದ್ಧ ಭಾಷ್ಯಕಾರರ ಮತ್ತು ರಾಜ-ರಾಣಿಯರ ಕಾಲ ಮಾನವನ್ನೂ ಸಹ ತಲೆಕೆಳಗಾಗಿ ಮಾಡಬೇಕೆಂದು ಇವರು ಎಷ್ಟು

ದಿವಸಗಳಿಂದ ಸಂಕಲ್ಪಮಾಡಿಕೊಂಡಿದ್ದರೋ ? ಎಂಬುದು ತಿಳಿಯದಾಗಿದೆ. ಇವರ ಅಪುಂಗಲ ಬರವಣಿಗೆಯ ಹೂರಣವು ಈಗ ಹೊರಬೀಳಬೇಕೆಂದು ಈಶ್ವರಸಂಕಲ್ಪವಿದ್ದಂತೆ ತೋರುತ್ತದೆ. ಅಸ್ತು ! ವಾಚಕರ ಅವಗಾಹನಕ್ಕಾಗಿ ಈಸಂದರ್ಭದಲ್ಲಿ ರುದ್ರಾಂಬೆಯ ವಿಷಯವನ್ನು ಸಂಕ್ಷೇಪವಾಗಿ ವಿವರಿಸೋಣ!

ಕಾಕತೀಯವಂಶದ **ಗಣಪತಿರಾಜನು** ಒರಂಗಲ್ಲನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ. ಶ. **೧೧೯೯** ರಿಂದ **೧೨೬೦** ರ ವರೆಗೆ ರಾಜ್ಯವಾಳಿದನು. ಈ ರಾಜನಿಗೆ ಗಂಡುಮಕ್ಕಳಿದ್ದಿಲ್ಲ. "**ರುದ್ರಾಂಬಾ**" ಮತ್ತು "**ಗಣಪಾಂಬಾ**" ಎಂಬ ಇಬ್ಬರು ಹೆಣ್ಣುಮಕ್ಕಳು ಮಾತ್ರ ಇದ್ದರು. ಇವರಿಬ್ಬರಲ್ಲಿ ರುದ್ರಾಂಬೆಯು ಬಹು ಕುಶಲಳಾಗಿದ್ದಕಾರಣ ಗಣಪತಿರಾಜನು ಈಕೆಯನ್ನೇ ರಾಜ್ಞಿಯನ್ನಾಗಿ ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದನು. ತಂದೆಯಿರುವಾಗಲೇ ಈಕೆಯು ರಾಜ್ಯಭಾರವನ್ನು ವಹಿಸಿದ್ದಳು. ತಂದೆಯು ಸತ್ತುಹೋದಮೇಲೆ ಈಕೆಯು ಶಾಲಿವಾಹನಶಕ ೧೧೮೩ ( ಕ್ರಿ. ಶ. **೧೨೬೧** ) ರಲ್ಲಿ ರಾಜಪಟ್ಟವನ್ನು ವಹಿಸಿ ರಾಜ್ಞಿಯಾಗಿ, "ರುದ್ರದೇವಮಹಾರಾಜ" ಎಂಬ ಹೆಸರನ್ನಿಟ್ಟುಕೊಂಡು ದಕ್ಷತೆಯಿಂದ ರಾಜ್ಯವನ್ನಾಳಿದಳು. ರುದ್ರಾಂಬೆಯು ಬಹುದಕ್ಷತೆಯಿಂದ ರಾಜ್ಯವಾಳುತ್ತ ಪ್ರಜೆಗಳನ್ನು ಅತ್ಯುತ್ತಮರೀತಿಯಿಂದ ರಕ್ಷಿಸುತ್ತಿದ್ದಳೆಂಬ ವಿಷಯವನ್ನು, ಆ ಕಾಲಕ್ಕೆ ಈಕೆಯ ರಾಜ್ಯಕ್ಕೆ ಬಂದಿದ್ದ ಇಟಲಿದೇಶದ "ಮಾರ್ಕೋಪೋಲೊ" ಎಂಬ ಯಾತ್ರಿಕನು ಬರೆದಿರುವನು. ಈಕೆಯು **೧೨೯೧** ರ ವರೆಗೆ ರಾಜ್ಯವನ್ನಾಳಿದಳು. ಈಕೆಗೆ ಗಂಡುಮಕ್ಕಳಿದ್ದಿಲ್ಲ. "**ಮುಮ್ಮಡಾಂಬಾ**" ಎಂಬ ಒಬ್ಬ ಹೆಣ್ಣುಮಗಳು ಮಾತ್ರ ಇದ್ದಳು. ಆಕೆಗೆ "**ಪ್ರತಾಪರುದ್ರ**" ನೆಂಬ ಮಗನಿದ್ದನು. ರುದ್ರಾಂಬೆಯು ತನ್ನ ಮೊಮ್ಮಗನಾದ ಪ್ರತಾಪರುದ್ರನಿಗೆ **೧೨೯೧** ರಲ್ಲಿ ತನ್ನ ಅಧಿಕಾರವನ್ನು ವಹಿಸಿದಳು. ಈ ಪ್ರತಾಪರುದ್ರನು **೧೩೨೩** ರ ವರೆಗೆ ರಾಜ್ಯವಾಳಿದನು. ಈ ಪ್ರತಾಪರುದ್ರನ ವಿಷಯದಲ್ಲಿ "**ಪ್ರತಾಪರುದ್ರೀಯ**" ಎಂಬ ಅಲಂಕಾರಗ್ರಂಥವು ರಚಿಸಲ್ಪಟ್ಟಿರುವದು. ಹತಭಾಗ್ಯನಾದ ಈ ಪ್ರತಾಪರುದ್ರನ ಕಾಲದಲ್ಲಿ ಮಲ್ಲಿಕ್‌ಕಾಫರನು ದಿಲ್ಲಿ

ಯಿಂದ ದಂಡೆತ್ತಿಬಂದು, ಇವನನ್ನು ಯುದ್ಧದಲ್ಲಿ ಸೋಲಿಸಿ, ಇವನಿಂದ ೩೦೦ ಆನೆಗಳನ್ನೂ, ೭೦೦೦ ಕುದುರೆಗಳನ್ನೂ, ಅಗಣಿತದ್ರವ್ಯವನ್ನೂ ಕಿತ್ತುಕೊಂಡು ೧೩೧೦ ರಲ್ಲಿ ದಿಲ್ಲಿಗೆ ಹೋದನು. ಪುನಃ ಮುಸಲ್ಮಾನರು ೧೩೨೩ ರಲ್ಲಿ ಇವನ ರಾಜ್ಯಕ್ಕೆ ಬಂದು ಮುತ್ತಿಗೆಹಾಕಿ, ಇವನನ್ನು ಸೆರೆ ಹಿಡಿದು ದಿಲ್ಲಿಗೆ ಒಯ್ದರು. ಅಲ್ಲಿಗೆ ಈ ಕಾಕತೀಯರಾಜ್ಯವು ನಷ್ಟವಾಯಿತು. ಈ ರೀತಿಯಾಗಿ ನಿಜವಾದ ಚರಿತ್ರವಿರುವದು. ಹೀಗಿದ್ದರೂ ರಾಯರು ರುದ್ರಾಂಬೆಯ ಕಾಲವನ್ನು ಶ್ರೀಪತಿಪಂಡಿತರ ಕಾಲನಿರ್ಣಯಕ್ಕಾಗಿ ವ್ಯತ್ಯಾಸಮಾಡಿರುವದು ಅತ್ಯಂತ ಅನ್ಯಾಯವಾಗಿದೆ.

ರಾ|| ಬ|| ಕೃಷ್ಣಶಾಸ್ತ್ರಿಗಳವರು ಒಬ್ಬ ಶೈವಾರಾಧ್ಯನು ವಸ್ತ್ರದಲ್ಲಿ ಬೆಂಕಿಯನ್ನು ಕಟ್ಟಿ ಸುಡದಂತೆ ಮಾಡಿದ ಮಹಿಮೆಯು ಬಹುಶಃ ಕಾಕತೀಯ ಗಣಪತಿರಾಜನ ಕಾಲದಲ್ಲಾಗಲಿ ಅಥವಾ ಅವನ ಮಗಳು ರುದ್ರಾಂಬೆಯ ಕಾಲದಲ್ಲಾಗಲಿ ನಡೆದಿರಬಹುದೆಂದು ಸಂಶಯದಿಂದ ಹೇಳಿದ್ದಾರೆ. ಅವರು ಸಂಶಯದಿಂದ ಹೇಳಿದುದನ್ನೇ ರಾಯರು ನಿಶ್ಚಯವೆಂದು ಭಾವಿಸಿಕೊಂಡು, ಶ್ರೀಪತಿಪಂಡಿತರನ್ನೂ ಮತ್ತು ರುದ್ರಾಂಬೆಯನ್ನೂ ಸಮಕಾಲಿಕರನ್ನಾಗಿ ಮಾಡಬೇಕೆಂಬ ಮಹಾಸಾಹಸದಲ್ಲಿ ಬಿದ್ದಿರುವರು. ಕ್ರಿ. ಶ. ೧೨೯೧ ರಲ್ಲಿ ಸತ್ತುಹೋಗಿರುವ ರುದ್ರಾಂಬೆಗೂ, ಕ್ರಿ. ಶ. ೧೪೦೦ ರಲ್ಲಿದ್ದರೆಂದು ತಾವು ಹೇಳುವ ಶ್ರೀಪತಿಪಂಡಿತರಿಗೂ ಗಂಟುಹಾಕಲು ಪ್ರಯತ್ನಪಟ್ಟಿರುವ ರಾಯರ ಸಾಹಸವು, ಇಂಗ್ಲೆಂಡಿನಲ್ಲಿರುವ ಥೇಮ್ಸ್ನದಿಗೂ, ಇಂಡಿಯಾ ದಲ್ಲಿರುವ ಗಂಗಾನದಿಗೂ ಗಂಟುಹಾಕುವ ಸಾಹಸದಂತಿರುವದು. ಇಂತಹ ಇತಿಹಾಸಶೋಧಕರು ಈ ಭೂಮಂಡಲದಲ್ಲಿ ದೊರೆಯುವದು ಪರಮ ದುರ್ಲಭವು! ಮನುಷ್ಯರು ಯಾವುದಾದರೊಂದು ವಿಷಯವನ್ನು ಗಟ್ಟಿಯಾಗಿ ಹಿಡಿದುಕೊಂಡು ಹಠವನ್ನು ಸಾಧಿಸಹೋದರೆ ಇಲ್ಲದ್ದೊಂದನ್ನು ಕಲ್ಪಿಸ ಬೇಕಾಗುವದಷ್ಟೆ! ಆದರಂತೆ ರಾಯರು ತಾವು ಬರೆದ ಕಾಲವನ್ನೇ ನಿರ್ಣಯಿಸಬೇಕೆಂದು ಈ ರೀತಿಯಾಗಿ ಬಹುಕಷ್ಟಪಟ್ಟಿದ್ದಾರೆ. ಹೀಗೆ ಮಾಡುವದು ಎಷ್ಟೂ ಸರಿಯಾದದ್ದಲ್ಲ.

# ಶಿಲಾಶಾಸನದ ಆಧಾರದಿಂದ ಶ್ರೀಪತಿಪಂಡಿತಾರಾಧ್ಯರ ಕಾಲನಿರ್ಣಯದ ಜಯಭೇರೀನಿನಾದ.

M. E. R. 536 ನೆಯ ನಂಬರಿನ ಶಾಸನದಲ್ಲಿ ಶ್ರೀಪತಿಪಂಡಿತಾರಾಧ್ಯರು ವಸ್ತ್ರದಲ್ಲಿ ಬೆಂಕಿಯನ್ನು ಕಟ್ಟಿ ಮಹಿಮೆಯನ್ನು ತೋರಿಸಿದ ವಿಷಯವು ಬರೆಯಲ್ಪಟ್ಟಿರುವದರಿಂದ, ಅವರ ಕಾಲವನ್ನು ೧೧ ನೆಯ ಶತಮಾನಕ್ಕೆ ಹಾಕುವದಕ್ಕಾಗುವದಿಲ್ಲವೆಂದೂ, ಅವರು ಕ್ರಿ. ಶ. ೧೪೦೦ ರಲ್ಲಿಯೇ ಇದ್ದರೆಂದೂ ರಾಯರು ತಮ್ಮ ಉತ್ತರದಲ್ಲಿ ಬರೆದಿರುವರು. ರಾಯರು ಉತ್ತರದಲ್ಲಿ ಬರೆದಿರುವ ಶಾಸನಗಳ ಮೂಲಕಾಪಿಗಳನ್ನು ತರುವದಕ್ಕಾಗಿ ಮದ್ರಾಸಿಗೆ ಹೋಗಿದ್ದೆನು. ದಯಾಳುಗಳಾದ ಶಾಸನ ಇಲಾಖೆಯ ಅಧಿಕಾರಿಗಳು ನಾನು ಕೇಳಿದ ಎಲ್ಲ ಶಾಸನಗಳ ಕಾಪಿಗಳನ್ನೂ ಕೊಟ್ಟರು. ಇದಕ್ಕಾಗಿ ಅವರನ್ನು ಎಷ್ಟು ಸ್ತುತಿಸಿದರೂ ತೀರದಾಗಿದೆ. ಅಸ್ತು! ರಾಯರು ಶ್ರೀಪತಿಪಂಡಿತಾರಾಧ್ಯರ ಮಹಿಮೆಯನ್ನು ಸ್ಪಷ್ಟವಾಗಿ ಪ್ರತಿಪಾದಿಸುವ ಬೆಜವಾಡ ಶಾಸನದ ಮೂಲಕಾಪಿಯನ್ನು ತರಿಸಿಕೊಂಡು ಸರಿಯಾಗಿ ವಿಮರ್ಶಿಸಿ, ಆ ಮಹಾತ್ಮರ ಕಾಲವನ್ನು ನಿರ್ಣಯಿಸಬೇಕಾಗಿತ್ತು. ಹಾಗೆ ಮಾಡದೆ ತಮ್ಮ ಮನಸ್ಸಿಗೆ ಬಂದಂತೆ ತಪ್ಪುತಪ್ಪಾಗಿ ಬರೆದಿರುವದನ್ನು ನೋಡಿ ಬಹಳ ವಿಷಾದಪಡಬೇಕಾಗಿದೆ. 536 ನೆಯ ನಂಬರಿನ ಶಾಸನವು ಶ್ರೀಪತಿಪಂಡಿತಾರಾಧ್ಯರು ಕ್ರಿ. ಶ. ೧೧ ನೆಯ ಶತಮಾನದಲ್ಲಿದ್ದರೆಂಬುದನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತಿರುವದು. ಈ ವಿಷಯವನ್ನು ರಾಯರು ವಿಶಾಲವಾದ ಹೃದಯದಿಂದ ವಿಮರ್ಶಿಸಬೇಕು. ಬೆಜವಾಡದ ಮಲ್ಲೇಶ್ವರದೇವಾಲಯದ ಪ್ರಾಕಾರದಲ್ಲಿ ಮುಚ್ಚಿಹೋಗಿದ್ದ ಈ ಶಾಸನವು, ಮದ್ರಾಸ್ ಶಾಸನ ಇಲಾಖೆಯವರಿಗೆ ೧೯೧೯ ನೆಯ ಇಸ್ವಿಯಲ್ಲಿ ದೊರೆಯಿತು. ಈ ಶಾಸನದ ಕಲ್ಲು ಪೂರ್ತಿಯಾಗಿರದೆ ಅರ್ಧಕ್ಕೆ ಒಡೆದುಹೋಗಿರುವದು. ಈ ಶಾಸನವನ್ನು ವೆಂಗಿದೇಶದ "ಪಲ್ಲಕೇತ" ನೆಂಬ ರಾಜನು ಚಾಲುಕ್ಯರ ಸಾಮಂತರಾಜನಾಗಿದ್ದ

ಬರೆಯಿಸಿರುವನು. ಶಾಸನದ ಪ್ರಾರಂಭದಲ್ಲಿ " ಮಲ್ಲೇಶ್ವರ " ದೇವರ ಮಹಿಮೆಯು ೯ ಸಂಸ್ಕೃತಶ್ಲೋಕಗಳಲ್ಲಿ ಬಹುಮನೋಹರವಾಗಿ ವರ್ಣಿಸಲ್ಪಟ್ಟಿದೆ. ಈ ಸಂದರ್ಭದಲ್ಲಿಯೇ ಶ್ರೀಪತಿಪಂಡಿತಾರಾಧ್ಯರು ತೋರಿಸಿದ ಅಗ್ನಿಸ್ತಂಭನಮಹಿಮೆಯು ವರ್ಣಿತವಾಗಿದೆ. ಆ ಶಾಸನದಲ್ಲಿ ಈ ಕೆಳಗೆ ಉಲ್ಲೇಖಿಸಿರುವ ಶ್ಲೋಕಗಳು ಕೆತ್ತಲ್ಪಟ್ಟಿರುವವು.

ವಿತಸ್ತಿವಿಸ್ತೃತೇನಾಪಿ ಸರ್ವೈಸ್ತುಲಿತತೇಜಸಾ ।
ಪೀತಾಶೇಷಾಬ್ಧಿತೋಯೇನ ಕುಂಭಜೇನಾಪ್ಯಗಸ್ತಿನಾ ॥

ಪೂರ್ವಂ ಕೃತಂ ಜಯೇಶಾನನಾಮಾಪಿ ತದನಂತರಂ ।
ಆರಾಧ್ಯ ಮಲ್ಲಯುದ್ಧೇನ ಫಲ್ಗುನೇನ ಕೃತಾಭಿಧಃ ॥

ಮಲ್ಲೇಶ್ವರ ಇತಿ ಖ್ಯಾತಃ ಸನ್ನಿಧತ್ತೇ ಮಹೇಶ್ವರಃ ।
ಶ್ರೀಮದ್ವಿಜಯನಾಟಾಖ್ಯಪುರೇ ಕೃಷ್ಣಾವಿಭೂಷಣೇ ॥

ಕಲೌ ಶ್ರೀಮಚ್ಛಕಾಬ್ದೇಽಬ್ಧಿಶಶಿಸಾಯಕಸಮ್ಮಿತೇ ।
ರಾಜಾ ಮಾಧವವರ್ಮಾಽಭೂದ್ವಿಖ್ಯಾತೋ ಧರಣೀತಲೇ ॥

ತತಃ ಸ್ವಪುತ್ರೇಣ ಹತೇ ತಿಂತ್ರಿಣೀಜೀವಿನೀಸುತೇ ।
ಧರ್ಮಸಂರಕ್ಷಣಾರ್ಥಾಯ ಸ್ವಪುತ್ರಮವಧೀತ್ ಸ ರಾಟ್ ॥

ತತೋ ಮಲ್ಲೇಶ್ವರಃ ಪ್ರೀತಃ ಸ್ವರ್ಣವೃಷ್ಟಿಂ ವವರ್ಷ ಚ ।
ಶಿಶುಪುತ್ರಕಯೋಃ ಪ್ರಾಣಂ ದತ್ತವಾಂಸ್ತಸ್ಯ ಕೀರ್ತಯೇ ॥

ತತಃ ಶ್ರೀಪಂಡಿತಾರಾಧ್ಯನಾಮ್ನಾ ಭಕ್ತೋತ್ತಮೇನ ಚ ।
ಶಿವಭಕ್ತ ಏವ ನೂನಂ ದೇವರ್ಷಿಭ್ಯೋಽಧಿಕ ಇತಿ ॥

ಚೀನಾಂಬರೇಽಗ್ನಿಂ ಸಂಸ್ಥಾಪ್ಯ ಶಮೀಕೋಮಲಶಾಖಯಾ ।
ಬದ್ಧೇ ಮಲ್ಲೇಶ್ವರಃ ಪ್ರೀತಃ ಪ್ರತ್ಯಕ್ಷಃ ಸಮಜಾಯತ ॥

ಈದೃಗ್ವಿಧಂ ಮಹಾದೇವಂ ಭಕ್ತವತ್ಸಲಮವ್ಯಯಂ ।
ಮಲ್ಲೇಶ್ವರಂ ಸಮಾರಾಧ್ಯ ಚೇಜಿರೇ ಪೃಥಿವೀಭುಜಃ ॥

"ಹನ್ನೆರಡು ಅಂಗುಲ ಎತ್ತರವುಳ್ಳವನಾಗಿದ್ದರೂ, ಸಮಸ್ತಸಮುದ್ರಗಳನ್ನು ಪಾನಮಾಡಿದ ಅಗಸ್ತ್ಯಮಹರ್ಷಿಯು ಪೂರ್ವದಲ್ಲಿ ಈ ಶಿವಲಿಂಗಕ್ಕೆ "**ಜಯೇಶಾನ**" ಎಂಬ ಹೆಸರನ್ನಿಟ್ಟನೆಂದೂ, ಆ ಮೇಲೆ ಅನೇಕ ವರ್ಷಗಳು ಕಳೆದನಂತರ ಅರ್ಜುನನು ಪರಮೇಶ್ವರನೊಡನೆ ಮಲ್ಲಯುದ್ಧವನ್ನು ಮಾಡಿ ಪರಮೇಶ್ವರನನ್ನು ಒಲಿಸಿಕೊಂಡುದುದರಿಂದ ಆ ಸ್ಮಾರಕವಾಗಿ ಕೃಷ್ಣಾನದಿಯ ತೀರದಲ್ಲಿ ವಿರಾಜಿಸುತ್ತಿರುವ ಬೆಜವಾಡದಲ್ಲಿ "**ಮಲ್ಲೇಶ್ವರ**" ಎಂಬ ಹೆಸರಿನಿಂದ ಪ್ರಸಿದ್ಧನಾದನೆಂದೂ, ಶಾಲಿವಾಹನಶಕ ೫೧೪ (ಕ್ರಿ. ಶ. ೫೯೨) ರಲ್ಲಿದ್ದ ಮಾಧವವರ್ಮನೆಂಬ ರಾಜನ ಮಗನು, ಹುಣಿಸಿಗಿಡದ ಎಲೆಯನ್ನು ಮಾರಿಕೊಂಡು ಉಪಜೀವಿಸುತ್ತಿದ್ದ ಒಬ್ಬ ಬಡವಿಯ ಮಗನನ್ನು ಕೊಂದುದರಿಂದ, ಆ ಮಾಧವವರ್ಮಮಹಾರಾಜನು ಧರ್ಮರಕ್ಷಣೆಗಾಗಿ ತನ್ನ ಮಗನಿಗೆ ಮರಣದಂಡನವನ್ನು ವಿಧಿಸಿದನೆಂದೂ, ಮಲ್ಲೇಶ್ವರನು ಈ ರಾಜನ ಧರ್ಮಬುದ್ಧಿಗೆ ಮೆಚ್ಚಿ ರಾಜನ ಮಗನಿಗೂ ಬಡವಿಯ ಮಗನಿಗೂ ಪ್ರಾಣದಾನವನ್ನು ಮಾಡಿ ಸ್ವರ್ಣವೃಷ್ಟಿಗರೆದನೆಂದೂ, ಇದಾದ ಕೆಲವು ದಿವಸಗಳಮೇಲೆ, ಶ್ರೀಪಂಡಿತಾರಾಧ್ಯನು ಅಲ್ಲಿಗೆ ಬಂದು ದೇವರ್ಷಿಗಳಿಗಿಂತಲೂ ಶಿವಭಕ್ತರೇ ಶ್ರೇಷ್ಠರೆಂದು ಸಾರಿ, ಅತ್ಯಂತ ಸೂಕ್ಷ್ಮವಾದ ಚೀನಾದೇಶದ ಬಟ್ಟೆಯಲ್ಲಿ ಬೆಂಕಿಯನ್ನಿಟ್ಟು ಅದನ್ನು ಬನ್ನಿಯಮರಕ್ಕೆ ಕಟ್ಟಿ ಅಗ್ನಿಸ್ತಂಭನವನ್ನು ಮಾಡಿದನೆಂದೂ, ಈ ವಿಧವಾದ ಮಹಿಮೆಯನ್ನು ನೋಡಿ ಮಲ್ಲೇಶ್ವರನು ಶ್ರೀಪಂಡಿತಾರಾಧ್ಯನಿಗೆ ಪ್ರತ್ಯಕ್ಷನಾದನೆಂದೂ, ಇಂತಹ ಭಕ್ತವತ್ಸಲನಾದ ಮಲ್ಲೇಶ್ವರನನ್ನು ಪೂರ್ವದಲ್ಲಿ ಅನೇಕಜನರಾಜರು ಸೇವಿಸಿ ಧನ್ಯರಾದರೆಂದೂ ಈ ಶ್ಲೋಕಗಳ ಅಭಿಪ್ರಾಯವಾಗಿರುವುದು."

ಈ ಶಾಸನದಲ್ಲಿ ವರ್ಣಿಸಿರುವ ಮಲ್ಲೇಶ್ವರನ ಮಹಿಮೆಯೆಲ್ಲವೂ, ಈ ಶಾಸನವನ್ನು ಬರೆಯಿಸಿದ ಪಲ್ಲಕೇತರಾಜನ ಕಾಲಕ್ಕಿಂತ ಮೊದಲೇ ನಡೆದುಹೋದುದೆಂಬುದು ಈ ಪದ್ಯಗಳಿಂದಲೇ ಗೊತ್ತಾಗುವುದು.

ತನಗಿಂತಲೂ ಪೂರ್ವದಲ್ಲಿ ನಡೆದು ಹೋಗಿರುವ ಈ ಎಲ್ಲ ಚರಿತ್ರವನ್ನು ಆ ರಾಜನು ತನ್ನ ಶಾಸನದ ಪ್ರಾರಂಭದಲ್ಲಿ ಕೆತ್ತಿಸಿ, ತಾನು ಇಂತಹ ಮಲ್ಲೇಶ್ವರಸ್ವಾಮಿಯ ಭಕ್ತನೆಂದು ಶಾಸನದಲ್ಲಿ ಹೇಳಿಕೊಂಡಿದ್ದಾನೆ.

ಈ ಶಾಸನದಲ್ಲಿ ಪಲ್ಲಕೇತಮಹಾರಾಜನ ವಂಶವಿಷಯವೂ, ಈತನ ಶೌರ್ಯ-ಧೈರ್ಯಾದಿವಿಷಯಗಳೂ ವರ್ಣಿಸಲ್ಪಟ್ಟಿವೆ. ಈ ಶಾಸನದಲ್ಲುಕ್ತವಾಗಿರುವ "**ಶ್ರೀಬೆಜವಾಡಮಲ್ಲೇಶ್ವರದೇವದಿವ್ಯಶ್ರೀಪಾದಪದ್ಮಾರಾಧಕ**" "**ಶ್ರೀವೆಂಗಿದೇಶಚಾಳುಕ್ಯನಂಕಕಾರ**" "**ಶ್ರೀಮನ್ಮಹಾಮಂಡಲೇಶ್ವರ ಪಲ್ಲಕೇತಭೂಪಾಲುಂಡು**" "**ಕಾಡ್ವೆಟ್ಟಿಮಹೀಪಾಲವಂಶಮುನವತರಿಂಚಿ**" ಇತ್ಯಾದಿವಾಕ್ಯಗಳನ್ನು ವಿಮರ್ಶಿಸಿದರೆ, ಈ ರಾಜನು ಬೆಜವಾಡದ ಮಲ್ಲೇಶ್ವರನ ಪರಮಭಕ್ತನೆಂದೂ, ಪಲ್ಲವಕುಲದ ಕಾಡವೆಟ್ಟಿನಾಮಕವಾದ ವಂಶದಲ್ಲಿ ಜನಿಸಿದವನೆಂದೂ, ಚಾಳುಕ್ಯರ ಸಾಮಂತರಾಜನೆಂದೂ ಸ್ಪಷ್ಟವಾಗುತ್ತದೆ.

ಈ ಶಾಸನದಲ್ಲಿ ಪಲ್ಲಕೇತರಾಜನು ಚಾಲುಕ್ಯರ ಮಾಂಡಲಿಕನಾಗಿದ್ದನೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವದರಿಂದ, ಈ ರಾಜನು ಪಶ್ಚಿಮಚಾಲುಕ್ಯರು (Western chalukyas) ಏಕಚ್ಛತ್ರಾಧಿಪತ್ಯದಿಂದ ರಾಜ್ಯವಾಳುತ್ತಿದ್ದಾಗ್ಗೆ, ಅವರಿಗೆ ಆಶ್ರಿತನಾಗಿದ್ದನೆಂದು ವ್ಯಕ್ತವಾಗುತ್ತದೆ. ಪಶ್ಚಿಮಚಾಲುಕ್ಯರು ೧೨ ನೆಯ ಶತಮಾನದ ಕೊನೆಯ ವರೆಗೆ ದಕ್ಷಿಣದೇಶವನ್ನಾಳಿದರೆಂಬ ವಿಷಯವು ಇತಿಹಾಸಪ್ರಸಿದ್ಧವೇ ಅದೆ. ಅಲ್ಲಿಗೆ ಅವರ ಸಂತತಿಯು ನಷ್ಟವಾಯಿತು. ಮುಂದೆ ಅವರ ಆಳ್ವಿಕೆಯೇ ಕಂಡು ಬರುವುದಿಲ್ಲ. ಇದರಿಂದ ಪಶ್ಚಿಮಚಾಲುಕ್ಯರ ಆಶ್ರಿತನಾಗಿದ್ದ ಪಲ್ಲಕೇತರಾಜನು ೧೨ ನೆಯ ಶತಮಾನದಲ್ಲಿದ್ದನೆಂಬುದರಲ್ಲಿ ಯಾವ ಸಂದೇಹವೂ ಇರುವದಿಲ್ಲ. ಬೆಜವಾಡದ ಮಲ್ಲೇಶ್ವರದೇವಾಲಯದಲ್ಲಿ ಸುಮಾರು ನೂರಾರು ಶಾಸನಗಳಿವೆ. ಅವುಗಳಲ್ಲಿ ೧೨ ನೆಯ ಶತಮಾನದ ಶಾಸನಗಳೇ ಹೆಚ್ಚಾಗಿವೆ. ೧೨ ನೆಯ ಶತಮಾನದಲ್ಲಿ ಚಾಲುಕ್ಯರಿಗೆ ಆಶ್ರಿತರಾಗಿದ

ಪ್ರತಿಯೊಬ್ಬ ರಾಜರೂ ಪಲ್ಲಕೇತರಾಜನ ಶಾಸನದಲ್ಲಿದ್ದಂತೆಯೇ "ವೆಂಗಿದೇಶ ಚಾಳುಕ್ಯನಂಕಕಾರ" ಎಂಬ ವಿಶೇಷಣವನ್ನು ತಮಗೆ ಸಂಬಂಧಿಸಿಕೊಂಡಿದ್ದಾರೆ. ೧೨ ನೆಯ ಶತಮಾನದಿಂದೀಚಿನ ಯಾವ ಶಾಸನಗಳಲ್ಲಿಯೂ ಈ ವಿಶೇಷಣವು ಕಂಡುಬರುವದಿಲ್ಲ. ಆದುದರಿಂದ ಪಲ್ಲಕೇತ ರಾಜನು ೧೨ ನೆಯ ಶತಮಾನದಲ್ಲಿದ್ದನೆಂಬುದರಲ್ಲಿ ತಿಲಮಾತ್ರವೂ ಸಂಶಯವಿರುವದಿಲ್ಲ.

ಶ್ರೀಮಾರ್ ವಿ. ರಂಗಾಚಾರ್ಯರು ಬರೆದಿರುವ "Inscriptions of Madras Presidency" Vol. II. ಎಂಬ ಪುಸ್ತಕದಲ್ಲಿ ಈ ಶಾಸನದ ಅಭಿಪ್ರಾಯವನ್ನು ಈ ಕೆಳಗೆ ಉದಾಹರಿಸಿರುವಂತೆ ಬರೆದಿದ್ದಾರೆ.

"Registers some legends in connection with the Malleswara Temple and refers to the chief as being born in the family of king Kadavetti and being subordinate to the Chalukya King of Vengidesa. The Inscription refers to a certain Panditaradhya who came to this place and proclaimed the superiority of Siva-Bhaktas to the Brahmans by holding live-coal in Chaina muslin with the tender twig of a Shami tree."

ಈ ವಾಕ್ಯಗಳ ಅಭಿಪ್ರಾಯವೇನೆಂದರೆ— "ಆ ಶಾಸನದಲ್ಲಿ ಮಲ್ಲೇಶ್ವರದೇವಸ್ಥಾನಕ್ಕೆ ಸಂಬಂಧಪಟ್ಟ ಕೆಲವು ಪೂರ್ವಕಥೆಗಳು ಬರೆಯಲ್ಪಟ್ಟಿವೆ. ಆ ಕಾಲದ ರಾಜನು ಕಾಡವೆಟ್ಟಿವಂಶದವನೆಂದೂ, ವೆಂಗಿದೇಶದ ಚಾಲುಕ್ಯರ ಮಾಂಡಲಿಕನೆಂದೂ, ಪಂಡಿತಾರಾಧ್ಯರೆಂಬವರು ಆ ಸ್ಥಳಕ್ಕೆ ಬಂದು ಉರಿಯುತ್ತಿದ್ದ ಬೆಂಕಿಯನ್ನು ಚೀನಾ ಮಲ್ಲುಬಟ್ಟೆಯಲ್ಲಿ ಬನ್ನಿಮರದ ಶಾಖೆಗೆ ಕಟ್ಟಿ ಬ್ರಾಹ್ಮಣರಿಗಿಂತಲೂ ಶಿವಭಕ್ತರ ಉತ್ಕೃಷ್ಟತೆಯನ್ನು ತೋರಿದರೆಂದೂ ಬರೆಯಲ್ಪಟ್ಟಿದೆ."

೧೨ ನೆಯ ಶತಮಾನದಲ್ಲಿದ್ದ ಪಲ್ಲಕೇತರಾಜನು ಶ್ರೀಪತಿಪಂಡಿತಾರಾಧ್ಯರು ಪೂರ್ವಕಾಲದಲ್ಲಿ ತೋರಿಸಿದ ಮಹಿಮೆಯ ಚರಿತ್ರವನ್ನು, ಅಗಸ್ತ್ಯ-ಅರ್ಜುನ-ಮಾಧವವರ್ಮರಾಜರ ಚರಿತ್ರದಂತೆ ತನ್ನ ಶಾಸನದಲ್ಲಿ ಉಲ್ಲೇಖಿಸಬೇಕಾದರೆ, ಶ್ರೀಪತಿಪಂಡಿತಾರಾಧ್ಯರು ಈ ರಾಜನಿಗಿಂತ ನೂರಾರುವರ್ಷಗಳ ಪೂರ್ವದಲ್ಲಿಯೇ ಈ ಮಹಿಮೆಯನ್ನು ತೋರಿಸಿರಬೇಕೆಂಬ ವಿಷಯವು ಚಿಕ್ಕಮಕ್ಕಳಿಗೂ ಸಹ ತಿಳಿಯುವಂತಿದೆ. ಆದುದರಿಂದ ಶ್ರೀಪತಿಪಂಡಿತಾರಾಧ್ಯರು ೧೧ ನೆಯ ಶತಮಾನದಲ್ಲಿ ಈ ಭೂಮಂಡಲದಲ್ಲಿ ಅವತರಿಸಿದರೆಂಬ ವಿಷಯವು ನಿರ್ವಿವಾದವಾದುದು. ಈ ಕಾರಣದಿಂದಲೇ ೧೨ ನೆಯ ಶತಮಾನದಲ್ಲಿದ್ದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ತಮ್ಮ "**ಶಿವತತ್ತ್ವಸಾರ**" ದಲ್ಲಿಯೂ, ಪಾಲ್ಕುರಿಕೆ ಸೋಮನಾಥನು "**ಆಂಧ್ರಬಸವಪುರಾಣ**" ದಲ್ಲಿಯೂ ಈ ಮಹಾತ್ಮರ ಮಹಿಮೆಯನ್ನು ಮುಕ್ತಕಂಠದಿಂದ ಹೊಗಳಿರುವರು. ೧೨ನೆಯ ಶತಮಾನದಲ್ಲಿ ಹುಟ್ಟಿದ ಗ್ರಂಥಗಳೂ, ಇದೇ ಶತಮಾನದಲ್ಲಿದ್ದ ಪಲ್ಲಕೇತರಾಜನ ಶಾಸನವೂ ಏಕಾಭಿಪ್ರಾಯವನ್ನೇ ಸಾರುತ್ತಿರುವದರಿಂದ, **ಶ್ರೀಪತಿಪಂಡಿತಾರಾಧ್ಯರು ೧೧ ನೆಯ ಶತಮಾನದಲ್ಲಿದ್ದರೆಂಬುದೇ ಘಂಟಾಘೋಷವಾದ ಸಿದ್ಧಾಂತವು! ಇದೇ ಈ ಮಹಿಮಾಶಾಲಿಗಳ ನಿಜವಾದ ಕಾಲವು!! ಇದೇ ಸತ್ಯಸಿದ್ಧಾಂತವನ್ನು ಉದ್ಘೋಷಿಸುವ ಜಯಭೇರಿಯ ಪ್ರಚಂಡನಿನಾದವು!!!**

## ಮೂಲಶಾಸನವನ್ನು ನೋಡದೆ ಇದ್ದುದರಿಂದುಂಟಾದ ಮಹಾಪ್ರಮಾದ.

ರಾಯರು ಮೊದಲೇ ಈ ಶಾಸನದ ಮೂಲಕಾಪಿಯನ್ನು ತರಿಸಿಕೊಂಡು ಸರಿಯಾಗಿ ನೋಡಿದ್ದರೆ, ಈ ಮಹಿಮಾಶಾಲಿಗಳ ಕಾಲವನ್ನು ತಪ್ಪುತಪ್ಪಾಗಿ ಎಂದೂ ಬರೆಯುತ್ತಿದ್ದಿಲ್ಲ. ಈ ಮಹಾನುಭಾವರ ಕಾಲವನ್ನು

೧೪೦೦ ಕ್ಕೆ ಹಾಕಬೇಕೆಂಬ ಭಗೀರಥಪ್ರಯತ್ನವನ್ನು ಎಂದೂ ಮಾಡು ತ್ತಿದ್ದಿಲ್ಲ. ಈ ಮಹಾತ್ಮರ ಕಾಲನಿರ್ಣಯಕ್ಕಾಗಿ ಅನೇಕಜನ ಪ್ರಾಚೀನ ಪಂಡಿತರ ಮತ್ತು ರಾಜ-ರಾಣಿಯರ ಕಾಲವನ್ನು ಎಂದೂ ವ್ಯತ್ಯಸ್ತಮಾಡು ತ್ತಿದ್ದಿಲ್ಲ. ಇವರು ಮೂಲಶಾಸನವನ್ನು ನೋಡದಿದ್ದುದೇ ಈ ಮಹಾ ಪ್ರಮಾದಕ್ಕೆ ಮುಖ್ಯಕಾರಣವೆಂದು ಹೇಳಬಹುದಾಗಿದೆ. ಮೂಲಶಾಸನ ವನ್ನು ನೋಡದಿದ್ದರೆ ಪ್ರಮಾದಗಳು ಯಾವ ರೀತಿಯಾಗಿ ಸಂಭವಿಸುವ ವೆಂಬುದನ್ನು ಇದೇ ಶಾಸನದಲ್ಲಿಯೇ ತೋರಿಸುವದಾಗುವದು. ರಾಯರು ಪೂರ್ಣವಿಚಾರದೃಷ್ಟಿಯಿಂದ ಪರಿಶೀಲಿಸಬೇಕು. ಇವರು ಶ್ರೀಕರಭಾಷ್ಯದ ಮೇಲೆ ಬರೆದಿರುವ ಇಂಟ್ರಡಕ್ಷನ್ನಿನ ೧೩ ನೆಯ ಪುಟದಲ್ಲಿ, ಈ ಶಾಸನಕ್ಕೆ ಇಂಗ್ಲೀಷ್ ಭಾಷೆಯಲ್ಲಿ ಬರೆದಿರುವ ಅರ್ಥವನ್ನು ಉದಾಹರಿಸಿದ್ದಾರೆ. ಈ ಶಾಸನದಲ್ಲಿ ಮಾಧವವರ್ಮಮಹಾರಾಜನ ಬಗ್ಗೆ ಬರೆಯಲ್ಪಟ್ಟಿರುವ—

> ಕಲೌ ಶ್ರೀಮುಚ್ಛಕಾಬ್ದೇಽಬ್ಧಿಶಶಿಸಾಯಕಸಮ್ಮಿತೇ ।
> ರಾಜಾ ಮಾಧವವರ್ಮಾಽಭೂದ್ವಿಖ್ಯಾತೋ ಧರಣೀತಲೇ ॥

ಎಂಬ ಶ್ಲೋಕಕ್ಕೆ ಇಂಗ್ಲೀಷ್ ಭಾಷೆಯಲ್ಲಿ—

"In the Kali Age again as early as the Saka year **117** (**295** A. D.) There was a king famous on earth by name Madhava Varman."

ಈ ರೀತಿಯಾಗಿ ಅರ್ಥವು ಬರೆಯಲ್ಪಟ್ಟಿರುವದು.

ಈ ಶ್ಲೋಕದಲ್ಲಿ ಮಾಧವವರ್ಮಮಹಾರಾಜನು ಶಾಲಿವಾಹನಶಕ ೫೧೪ ರಲ್ಲಿದ್ದನೆಂದು "ಅಬ್ಧಿ-ಶಶಿ-ಸಾಯಕ" ಎಂಬ ಶಬ್ದಗಳಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿದ್ದರೂ, ರಾಯರು ಉದಾಹರಿಸಿರುವ ಇಂಗ್ಲೀಷ್ ಅರ್ಥದಲ್ಲಿ ಶಕ ೧೧೭ ಎಂದು ಬರೆಯಲ್ಪಟ್ಟಿರುವದು. ಇದರಿಂದ ಮೂಲ ಶಾಸನದಲ್ಲಿರುವ ಕಾಲಕ್ಕೂ, ಇವರು ಉದಾಹರಿಸಿರುವ ಕಾಲಕ್ಕೂ ೩೯೭

ವರ್ಷಗಳ ವ್ಯತ್ಯಾಸವಾಗಿರುವದು. ಈ ವಿಷಯವು ರಾಯರ ಮನಸ್ಸಿಗೆ ಈಗ ಸ್ಪಷ್ಟವಾಗಿರಬಹುದು. ಮೂಲಶಾಸನಗಳನ್ನು ಕೂಲಂಕಷವಾಗಿ ವಿಚಾರ ಮಾಡದೆ, ೩೦೦-೪೦೦ ವರ್ಷಗಳ ವ್ಯತ್ಯಾಸವನ್ನು ತೋರಿಸಿರುವದು ಯೋಗ್ಯವೇ? ರಾಯರು ಮೂಲಶಾಸನವನ್ನು ನೋಡದಿರುವದರಿಂದ, ಮಾಧವವರ್ಮನ ಕಾಲವು ೩೯೭ ವರ್ಷಗಳಿಗೆ ಹಿಂದಕ್ಕೆ ಸರಿದಿದೆ. ಶ್ರೀಪತಿ ಪಂಡಿತಾರಾಧ್ಯರ ಕಾಲವು ೩೦೦ ವರ್ಷಗಳಿಗೆ ಮುಂದಕ್ಕೆ ಸರಿದಿದೆ. ಪೂರ್ವಾಪರವಿಚಾರಮಾಡದೆ ರಾಯರು ಈ ರೀತಿಯಾಗಿ ಈ ಶಾಸನದ ಕಾಲವನ್ನು ವ್ಯತ್ಯಸ್ತಮಾಡಿ ಬರೆದಿರುವದನ್ನು ನೋಡಿ ಬಹಳ ವ್ಯಸನ ಪಡಬೇಕಾಗಿದೆ.

ಇದಲ್ಲದೆ ಇದೇ ಶಾಸನದಲ್ಲಿ ಅಗಸ್ತ್ಯಮಹರ್ಷಿಗಳು ಪೂರ್ವದಲ್ಲಿ ಈ ಲಿಂಗಕ್ಕೆ "**ಜಯೇಶಾನ**" ಎಂಬ ಹೆಸರನ್ನಿಟ್ಟರೆಂದು ಸ್ಪಷ್ಟವಾಗಿ ಬರೆಯಲ್ಪಟ್ಟಿದ್ದರೂ, ರಾಯರು ಬರೆದಿರುವ ಇಂಟ್ರೊಡಕ್ಷನ್ನಿನ ೧೩ನೆಯ ಪುಟದ ೧೦ನೆಯ ಪಂಕ್ತಿಯಲ್ಲಿ, ಅಗಸ್ತ್ಯರು "**ಜಯಸೇನ**" ಎಂಬ ಹೆಸರನ್ನಿಟ್ಟರೆಂದು ಬರೆಯಲ್ಪಟ್ಟಿದೆ. ಇದೆಲ್ಲ ಮೂಲಶಾಸನವನ್ನು ನೋಡದೆ ಬರೆದುದರ ಫಲವಾಗಿದೆ. "**ಜಯೇಶಾನ**" ಶಬ್ದವೆಲ್ಲಿ? "**ಜಯಸೇನ**" ಶಬ್ದವೆಲ್ಲಿ? ಈ ಎರಡೂ ಶಬ್ದಗಳಿಗೂ ಭೂಮ್ಯಾಕಾಶದಷ್ಟು ಅಂತರವಿರು ತ್ತದೆ. "**ಜಯಸೇನ**" ಶಬ್ದವು ವಿಶೇಷವಾಗಿ ಜೈನರಲ್ಲಿ ಬಳಕೆಯಾಗಿದೆ. ರಾಯರು ಉದಾಹರಿಸಿರುವ ಈ ಶಬ್ದವನ್ನು ನೋಡಿದಕೂಡಲೆ ಜೈನರ ಹೆಸರು ಈ ಲಿಂಗಕ್ಕೆ ಏಕೆ ಬಂದಿರಬಹುದೆಂದು ಭ್ರಮೆಯಾಗುವಂತಿದೆ. ಈ ವಿಷಯವು ಈಗ ರಾಯರ ಮನಸ್ಸಿಗೆ ಚೆನ್ನಾಗಿ ಹೊಳೆದಿರಬಹುದು. ರಾಯರು ಬರೆದಿರುವ ಇಂಟ್ರೊಡಕ್ಷನ್ನು ಈ ವಿಧವಾದ ಅನಂತಾನಂತ ತಪ್ಪು ಗಳಿಂದ ಕೂಡಿ ಅಪಾಯಮಯವಾಗಿ ಹೋಗಿದೆ. ಅಸ್ತು!

ರಾಯರು ತಮ್ಮ ಉತ್ತರದಲ್ಲಿ—

"ಅನಂತಪಾಲರಾಜನ ಸಭೆಯಲ್ಲಿಶ್ರೀಪತಿಪಂಡಿತಾಚಾರ್ಯರು ಪ್ರಸಿದ್ಧ ಶಿವಾಚಾರ್ಯರಾಗಿದ್ದರೆಂದು ಬಸವೇಶ್ವರರು ಸೂಚಿಸಿದ್ದಾರೆ. ಎಂದು ಹೇಳುವ ಕತೆಯು ಬರಿಯ ಸುಳ್ಳು. ಆದಕಾರಣ ಅನಂತಪಾಲನು ೧೧ನೆಯ ಶತಕದವನು ಎಂಬುದನ್ನು ಪ್ರಮಾಣೀಕರಿಸಲಿಕ್ಕೆ ಉದಾಹರಿಸುವ ಶಾಸನಗಳಿಂದ ಯಾವ ಪ್ರಯೋಜನವೂ ಇಲ್ಲ. ಅನಂತಪಾಲರಾಜನ ಕಾಲವನ್ನು ಕುರಿತು ಯಾರೂ ಪ್ರಶ್ನೆ ಮಾಡಿರುವುದಿಲ್ಲ. ಅದು ಪ್ರಕೃತಕ್ಕೆ ಬೇಕಾಗಿಯೂ ಇಲ್ಲ. ಶ್ರೀಪತಿ ಪಂಡಿತಾಚಾರ್ಯರು ಅಗ್ನಿಯನ್ನು ಬನ್ನಿಯಮರಕ್ಕೆ ಬಟ್ಟೆಯಿಂದ ಕಟ್ಟಿದ ಕತೆಯನ್ನು ಭೂಮಿಕೆಯ ೯—೧೭ ನೆಯ ಪುಟಗಳಲ್ಲಿ ಸೂಚಿಸಿದ್ದೇನೆ. ಇದು ........ಬೆಜವಾಡವೆಂದು ಕರೆಯಲ್ಪಡುವ ವಿಜಯವಾಟಿಕಾಪುರದಲ್ಲಿ ಮಲ್ಲೇಶ್ವರ ದೇವರ ಮುಂದೆ ನಡೆದಂತೆ ತಿಳಿದುಬರುತ್ತದೆ. ಶ್ರೀಪತಿಪಂಡಿತಾಚಾರ್ಯರು ಆ ಊರಿನವರು. ಅಲ್ಲಿಗೆ ಸಮೀಪದಲ್ಲಿಯೇ ಅವರ ಸಂತತಿಯವರು ಈಗಲೂ ಇದ್ದಾರೆ. ಈ ಘಟನೆಯು ಯಾವ ಸಂದರ್ಭದಲ್ಲಿ ಹೇಗೆ ಅನಂತಪಾಲನ ಸಭೆಗೆ ಮಾರ್ಪಟ್ಟಿತೆಂಬುದನ್ನು ಆ ಕತೆಯಲ್ಲಿ ವಿಶ್ವಾಸವುಳ್ಳವರೇ ತಿಳಿಸಬೇಕು."

ಎಂದು ಬರೆದಿದ್ದಾರೆ. ಸತ್ಯವಾದ ಈ ಕಥೆಯನ್ನು ಅತ್ಯಂತಸತ್ಯವೆಂದು ಸಾರುವುದರ ಮೂಲಕ ಸಿದ್ಧಾಂತಗೊಳಲು ಈ ಲೇಖಕರು ಸಿದ್ಧರಿದ್ದಾರೆ. ರಾಯರು ಕಥೆಯ ವಿವರವನ್ನು ಚನ್ನಾಗಿ ತಿಳಿದುಕೊಳ್ಳಬೇಕು. ರಾಯರು ಶ್ರೀಪತಿಪಂಡಿತರ ಸಮಗ್ರಚರಿತ್ರವನ್ನು ಸರಿಯಾಗಿ ಅರಿತುಕೊಂಡಿದ್ದರೆ, ಈವಿಧವಾದ ಬರವಣಿಗೆಯನ್ನೇ ಬರೆಯುತ್ತಿದ್ದಿಲ್ಲ. ಅನಂತಪಾಲರಾಜನಿಗೂ ಶ್ರೀಪತಿಪಂಡಿತಾಚಾರ್ಯರಿಗೂ ಏನೂ ಸಂಬಂಧವಿಲ್ಲವೆಂದು ಬರೆಯುವುದನ್ನು ನೋಡಿದರೆ, ಇವರಿಗೆ ಆ ಮಹಾತ್ಮರ ಇತಿಹಾಸವು ಎಷ್ಟೂ ಗೊತ್ತಿಲ್ಲವೆಂದೇ ಹೇಳಬೇಕಾಗಿದೆ. ಆದುದರಿಂದ ಬಸವನು ಬಿಜ್ಜಳನ ಮುಂದೆ ಹೇಳಿದ ಶ್ರೀಪತಿಪಂಡಿತರ ಕಥೆಯು ರಾಯರಿಗೆ ಸುಳ್ಳಾಗಿ ತೋರಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ರಾಯರೇ ! ಅನಂತಪಾಲರಾಜನು ಯಾರೆಂದು ತಿಳಿದಿರುವಿರಿ ? ಅವನು ಶ್ರೀಪತಿಪಂಡಿತಾರಾಧ್ಯರ ಮುಖ್ಯಶಿಷ್ಯನು. ಶ್ರೀಪತಿ ಪಂಡಿತಾರಾಧ್ಯರು ತಮ್ಮ ಶಿಷ್ಯನಾದ ಅನಂತಪಾಲನ ಸಮ್ಮುಖದಲ್ಲಿಯೇ

ಬೆಜವಾಡದ ಮಲ್ಲೇಶ್ವರದೇವಾಲಯದಲ್ಲಿ ಅಗ್ನಿಸ್ತಂಭನಮಹಿಮೆಯನ್ನು ತೋರಿಸಿದರು. ಆದುದರಿಂದಲೇ ೧೨ನೆಯ ಶತಮಾನದಲ್ಲಿದ್ದ ಗ್ರಂಥಕಾರರೆಲ್ಲರೂ ತಮ್ಮ ಗ್ರಂಥಗಳಲ್ಲಿ ಶ್ರೀಪತಿಪಂಡಿತಾರಾಧ್ಯರ ಈ ಮಹಿಮೆಯನ್ನು ಬರೆಯುವಾಗ, ಅನಂತಪಾಲರಾಜನ ಹೆಸರನ್ನು ತೆಗೆದುಕೊಂಡಿರುವರು. ಇದೇಕಾರಣದಿಂದಲೇ ಮೊದಲಿನ ನನ್ನಲೇಖದಲ್ಲಿ ಶ್ರೀಪತಿಪಂಡಿತಾರಾಧ್ಯರ ಕಾಲನಿರ್ಣಯಕ್ಕಾಗಿ ಅನಂತಪಾಲರಾಜನ ಶಾಸನಗಳನ್ನು ಉದಾಹರಿಸಬೇಕಾಯಿತೆಂಬುದನ್ನು ಚನ್ನಾಗಿ ತಿಳಿದುಕೊಳ್ಳಬೇಕು. ಅಸ್ತು!

ರಾಯರು ಶ್ರೀಪತಿಪಂಡಿತಾಚಾರ್ಯರು ಬೆಜವಾಡದವರೆಂದೂ, ಅಲ್ಲಿಯೇ ಅವರು ಮಹಿಮೆಯನ್ನು ತೋರಿಸಿದರೆಂದೂ, ಅವರ ಸಾಂಪ್ರದಾಯಿಕರು ಈಗಲೂ ಇರುವರೆಂದೂ ಬರೆದಿರುವುದು ನಿಜವು. ಆದರೆ ಅವರ ಸಾಂಪ್ರದಾಯಿಕರು ಶ್ರೀಪತಿಪಂಡಿತಾರಾಧ್ಯರ ಕಾಲವನ್ನೂ ಅವರ ಚರಿತ್ರವನ್ನೂ ಯಾವ ರೀತಿಯಾಗಿ ಹೇಳುತ್ತಾರೆಂಬುದು ಮಾತ್ರ ರಾಯರಿಗೆ ತಿಲಮಾತ್ರವೂ ಗೊತ್ತಿರುವುದಿಲ್ಲ. ಆದುದರಿಂದ ರಾಯರಿಗೆ ಈ ವಿಷಯವನ್ನು ಈ ಲೇಖನದ ಮೂಲಕ ತಿಳುಹಿಸುವದಾಗುವುದು.

## ಶ್ರೀಪತಿಪಂಡಿತಾರಾಧ್ಯರು ಅಗ್ನಿಸ್ತಂಭನಮಾಡುವುದಕ್ಕೆ ಕಾರಣ.

ಶ್ರೀಪತಿಪಂಡಿತಾರಾಧ್ಯರ ಸಾಂಪ್ರದಾಯಿಕರಾದ "ಕಾಶೀನಾಥುನಿ ವೀರಾರಾಧ್ಯ" ರೆಂಬವರು ಪೂರ್ವದಲ್ಲಿ "**ಧರ್ಮಗುಪ್ತಾಭ್ಯುದಯ**" ವೆಂಬ ಗ್ರಂಥವನ್ನು ಆಂಧ್ರಭಾಷೆಯಲ್ಲಿ ಬರೆದಿರುವರು. ಆ ಗ್ರಂಥದಲ್ಲಿ— ಶ್ರೀಪತಿಪಂಡಿತಾರಾಧ್ಯರು ಮಲ್ಲೇಶ್ವರದೇವಾಲಯದಲ್ಲಿ ತಮ್ಮ ಶಿಷ್ಯನಾದ ಅನಂತಪಾಲರಾಜನ ಸಮ್ಮುಖದಲ್ಲಿ ತೋರಿಸಿದ ಅಗ್ನಿಸ್ತಂಭನಮಹಿಮೆಯೂ ಅಗ್ನಿಸ್ತಂಭನವನ್ನು ಏಕೆ ಮಾಡಿದರೆಂಬ ವಿಷಯವೂ ವಿಶದವಾಗಿ ಪ್ರತಿಪಾದಿಸಲ್ಪಟ್ಟಿದೆ.

ಶ್ರೀಪತಿಪಂಡಿತಾರಾಧ್ಯರು ಬಿಜವಾಡದಲ್ಲಿ ವಾಸಿಸುತ್ತಿದ್ದರೆಂದೂ, ಆ ಸಮಯದಲ್ಲಿ ಬಿಜವಾಡದಲ್ಲಿರುತ್ತಿದ್ದ ಅನಂತಪಾಲರಾಜನು ಇವರಿಗೆ ಶಿಷ್ಯನಾಗಿದ್ದನೆಂದೂ, ಇವರು ಪ್ರತಿದಿನವೂ ಭೋಗಶೇಖರಮಂದಿರದಲ್ಲಿ ಶಿವನ ಮತ್ತು ಶಿವಭಕ್ತರ ಮಹಿಮೆಯನ್ನು ಪ್ರವಚನರೂಪವಾಗಿ ಬೋಧಿಸುತ್ತಿದ್ದರೆಂದೂ, ಇವರು ಬೋಧಿಸುತ್ತಿದ್ದ ಶಿವಭಕ್ತರ ಶ್ರೇಷ್ಠತೆಯನ್ನು ಕೇಳಲಾರದೆ ಪರವಾದಿಗಳು ಇವರನ್ನು ದೂಷಿಸಹತ್ತಿದರೆಂದೂ, ಕಡೆಗೆ ಈ ವಿಷಯವು ಅನಂತಪಾಲರಾಜನ ಆಸ್ಥಾನಕ್ಕೆ ಬಂದಿತೆಂದೂ, ಅಲ್ಲಿ ಇವರು ಶಾಸ್ತ್ರಾರ್ಥವನ್ನು ಮಾಡಿ ಪರವಾದಿಗಳನ್ನು ಜಯಿಸಿದರೆಂದೂ, ಆದರೂ ಪರವಾದಿಗಳು ಇವರ ಮಾತನ್ನು ಅಂಗೀಕರಿಸದೆ ಇವರಿಗೆ ಬೆಂಕಿಯು ಸಹ ಸಿಕ್ಕದಂತೆ ಮಾಡಿದರೆಂದೂ, ಆಗ್ಗೆ ಇವರು ನನ್ನ ಸಿದ್ಧಾಂತವನ್ನು ಖಂಡಿಸದೆ ಸುಮ್ಮನೆ ಬೆಂಕಿಯನ್ನು ಕೊಡದಂತೆ ಅಡ್ಡಿಪಡಿಸಿರುವುದು ಪೌರುಷವಲ್ಲವೆಂದು ನುಡಿಯುತ್ತ, ಪ್ರಲಯಾಗ್ನಿಯಂತೆ ಕೋಪಾವಿಷ್ಟರಾಗಿ ಆರ್ಭಟಿಸುತ್ತ, ಮಲ್ಲೇಶ್ವರದೇವಾಲಯದ ಆಗ್ನೇಯ ದಿಕ್ಕಿನಲ್ಲಿದ್ದ ಬನ್ನಿಯಮರದ ಬಳಿಗೆ ಹೋಗಿ, ಪ್ರಮಥರ ಸ್ತೋತ್ರವನ್ನು ಮಾಡಿ, ಅಗ್ನಿಯನ್ನು ಆಕರ್ಷಿಸುತ್ತ ತಮ್ಮ ರೇಶಮಿಯ ವಸ್ತ್ರದಲ್ಲಿ ಕಟ್ಟಿ, "ಎಲೈ ಅಗ್ನಿಯೇ! ನೀನು ಶಿವಭಕ್ತರ ಮನೆಗಳನ್ನು ಬಿಟ್ಟು ಮಿಕ್ಕವರ ಮನೆಗಳಲ್ಲಿ ಇರಕೂಡದು; ಪರವಾದಿಗಳ ಮದವನ್ನು ತಗ್ಗಿಸಬೇಕು; ಶಿವನ ಆಜ್ಞೆಯನ್ನು ಮೀರಿದಾಗ ವೀರಭದ್ರನಿಂದ ನಿನಗಾದ ಶಿಕ್ಷೆಯು ಸ್ಮರಣೆಯಲ್ಲಿರಬಹುದು; ಈ ಬಗ್ಗೆ ನಿನಗೆ ಹೆಚ್ಚಿಗೆ ಹೇಳುವದೇನಿದೆ?" ಎಂದು ನುಡಿಯಲು, ಈ ಮಹಾತ್ಮರ ಅಪ್ಪಣೆಯಂತೆ ಪರವಾದಿಗಳಿಗೆ ಒಂದು ವಾರದ ವರೆಗೆ ಅಗ್ನಿಯು ದೊರೆಯದಂತಾಯಿತೆಂದೂ, ಆಗ ಪರವಾದಿಗಳು ಅನಂತಪಾಲರಾಜನೊಡನೆ ಬಂದು ಶರಣಾಗತರಾಗಿ ಶಿಷ್ಯತ್ವವನ್ನು ವಹಿಸಿದರೆಂದೂ ಬರೆಯಲ್ಪಟ್ಟಿದೆ. ಗ್ರಂಥಕಾರರು ಈ ಚರಿತ್ರವನ್ನು ಅನೇಕಗದ್ಯಪದ್ಯಗಳಲ್ಲಿ ಬಹುಮನೋಹರವಾಗಿ ವರ್ಣಿಸಿದ್ದಾರೆ.

ವಾಚಕರ ಅವಗಾಹನಕ್ಕಾಗಿ ಆ ಗ್ರಂಥದಲ್ಲುಕ್ತವಾಗಿರುವ ಒಂದೆರಡು ವಾಕ್ಯಗಳನ್ನು ಈ ಕೆಳಗೆ ಉದಾಹರಿಸುವದಾಗುವದು.

ಶಿವುಡೆ ದೈವಮು ಧರಲೊ
ಶಿವಭಕ್ತುಲೆ ಸತ್ಕುಲೀನಸಿದ್ಧಾಂತಪರುಲ್ ।
ಶಿವಮಂತ್ರಮೆ ಮನುರಾಜಮು
ಶಿವುನಿ ಪ್ರಸಾದಂಬೆ ಭೋಗಶೇಖರ ಮರಯುನ್ ॥

ಅನಿ ಶಪಥಂಬುಗಾ ಬಲುಕುಚು ನನಂತಪಾಲದಂಡನಾಯಕ ಮಹೀಧವಾದಿಶಿಷ್ಯತತಿಸೇವಾಯತ್ತಚಿತ್ತಂಬುಲಂ ಬ್ರವರ್ತಿಂಪು ಚುಂಡ ಬರವಾದಿಕೋಲಾಹಲುಂಡೈ ಜಯವಾಟೀಪುರಂಬುನ ವಿಜಯಧ್ವಜಂಬೆತ್ತಿ ಮಹೋತ್ತರಶೈವಾಚಾರ್ಯುಂ ಡನಜೆಲಂಗು ಚುಂಡಿ ಯೊಕ್ಕನಾಡು ॥

..........................................................................................

ಇಟ್ಲು ಪರವಾದು ಲಪ್ಪಂಡಿತೇಂದ್ರು ನನಂತಪಾಲದಂಡ ನಾಯಕ ಭೂವರಾಸ್ಥಾನಂಬುನಕು ಗೋನಿಪೋಯಿ ಯಿಟ್ಲನಿರಿ ॥

..........................................................................................

ಅಪ್ಪಂಡಿತೇಂದ್ರುಂಡು ಜಯವಾಟಿಕಾಪುರಮಲ್ಲಿಕಾರ್ಜುನಾಗ್ನೇಯಭಾಗಂಬುನ ನುನ್ನ ಶಮೀಶಾಖಿಸಮೀಪಂಬುನಕು ನರಿಗಿ ಯದ್ದೇವುನಕಭಿವಂದನಂಬುಸು ಪ್ರಮಥಗಣಸ್ತೋತ್ರಂಬುನು ಗಾವಿಂಚಿ ವೀತಿಹೋತ್ರುನಾಕರ್ಷಿಂಪುಚು ದನಮೀದಿ ಪಟ್ಟು ಪಚ್ಚಡಂಬುನಂ ಗಟ್ಟಿ ಯಿಟ್ಲನಿಯೆ ॥

ಇದೇ ರೀತಿಯಾಗಿ ಅನೇಕಗದ್ಯಪದ್ಯಗಳಿಂದ, ಈ ಮಹಾತ್ಮರು ತೋರಿಸಿದ ಮಹಿಮೆಯು ವರ್ಣಿಸಲ್ಪಟ್ಟಿರುವುದು. ಇದರಿಂದ ಅನಂತ ಪಾಲರಾಜನಿಗೂ ಶ್ರೀಪತಿಪಂಡಿತಾರಾಧ್ಯರಿಗೂ ಯಾವ ವಿಧವಾದ

ಸಂಬಂಧವಿರುವುದೆಂಬುದನ್ನು ರಾಯರು ಪೂರ್ಣವಾಗಿ ಪರ್ಯಾಲೋಚಿಸಿ, ಈ ಕಥೆಯು "ಸುಳ್ಳು" ಎಂದು ಬರೆದುದಕ್ಕಾಗಿ ಪೂರ್ಣಪಶ್ಚಾತ್ತಾಪವನ್ನು ಪ್ರದರ್ಶಿಸಬೇಕು.

ಶ್ರೀಪತಿಪಂಡಿತಾರಾಧ್ಯರ ಸಂಪ್ರದಾಯದವರಲ್ಲಿ ಸದ್ಯಃ ಮದ್ರಾಸಿನಲ್ಲಿ ಲೋಕವಿಖ್ಯಾತರಾದ ಪುರುಷರೊಬ್ಬರಿದ್ದಾರೆ. ಅವರೇ ಜಗತ್ಪ್ರಸಿದ್ಧವಾದ "ಅಮೃತಾಂಜನ" ಕಾರ್ಯಾಲಯಸ್ಥಾಪಕರೂ, ಸುಪ್ರಸಿದ್ಧ "ಆಂಧ್ರಪತ್ರಿಕೆಯ"ಸಂಪಾದಕರೂ ಆದ **ದೇಶೋದ್ಧಾರಕ ಕೆ. ನಾಗೇಶ್ವರರಾವ್"** ಮಹೋದಯರು. ನಾಗೇಶ್ವರರಾವ್ ರವರು ಇಂಡಿಯಾದೇಶದಲ್ಲೆಲ್ಲ ಅಸಾಧಾರಣವಾದ ಕೀರ್ತಿಯನ್ನು ಸಂಪಾದಿಸಿಕೊಂಡಿರುವರು. ಅವರ ಹೆಸರನ್ನು ಕೇಳದ ಭಾರತೀಯರೇ ಇರುವುದಿಲ್ಲ. ಈ ಸುಪ್ರಸಿದ್ಧಪುರುಷರು ಕೆಲವು ಗ್ರಂಥಗಳಲ್ಲಿ, ಶ್ರೀಪತಿಪಂಡಿತಾರಾಧ್ಯರು ಕ್ರಿ.ಶ. ೧೧ನೆಯ ಶತಮಾನದಲ್ಲಿದ್ದರೆಂದು ಪ್ರಸಿದ್ಧಪಡಿಸಿದ್ದಾರೆ.

ಆಂಧ್ರದೇಶಸಾಹಿತ್ಯದಲ್ಲಿ ಅಸಾಧಾರಣವಾದ ಕೀರ್ತಿಯನ್ನು ಪಡೆದಿರುವ ಶ್ರೀಪ್ರಭಾಕರಶಾಸ್ತ್ರಿಗಳೆಂಬವರು ೧೯೩೭ನೆಯ ಇಸ್ವಿಯಲ್ಲಿ ಪ್ರಕಟಿಸಿದ ಒಂದು ಲೇಖದಲ್ಲಿ, ಶ್ರೀಪತಿಪಂಡಿತಾರಾಧ್ಯರ ವಿಷಯವನ್ನು ಕೂಲಂಕಷವಾಗಿ ವಿಮರ್ಶಿಸುತ್ತ, ಈ ಕೆಳಗೆ ಉದಾಹರಿಸಿರುವಂತೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**"ಪಶ್ಚಿಮಚಾಳುಕ್ಯರಾಜಗು ನಾರವ ವಿಕ್ರಮಾದಿತ್ಯುನಿಯೊದ್ದ ದಂಡನಾಯಕುಡೈ ಪೆಕ್ಕುರಾಜ್ಯಮುನಲು ಜಯಿಂಚಿನಯನಂತಪಾಲುಡು ಕೊಂಡಪಲ್ಲಿನಾಡು ಪಾಲಿಂಚುಚು ಬೆಜವಾಡಲೊ ನುಂಡಗಾ ನೀಶ್ರೀಪತಿಪಂಡಿತುಡಾತನಿಕಿ ಗುರುಡೈಯುಂಡೆನು. ಅನಂತಪಾಲುನಿ ಶಾಸನಮು ಬೆಜವಾಡಕು ಜೆರುವಗಾನುನ್ನ ಚೆಬ್ರೋಲಗೂಡ ಗಲದು. ಆತಡು ಕ್ರಿ. ಶ. ೧೦೯೫-೧೧೧೮ ಲೊ ನುಂಡೆನು."**

" ಪಶ್ಚಿಮಚಾಳುಕ್ಯರಾಜನಾಗಿದ್ದ ವಿಕ್ರಮಾದಿತ್ಯನ ದಂಡನಾಯಕನಾದ ಅನಂತಪಾಲನು ಅನೇಕರಾಜ್ಯಗಳನ್ನು ಗೆದ್ದು " **ಕೊಂಡಪಲ್ಲಿ ನಾಡು** " ರಾಜ್ಯವನ್ನಾಳುತ್ತಿದ್ದನು. ಬಿಜವಾಡದಲ್ಲಿದ್ದ ಶ್ರೀಪತಿಪಂಡಿತಾರಾಧ್ಯರು ಈತನಿಗೆ ಗುರುವಾಗಿದ್ದರು. ಅನಂತಪಾಲರಾಜನ ಶಾಸನವು ಬಿಜವಾಡಕ್ಕೆ ಸಮೀಪದಲ್ಲಿರುವ " ಚೆಬ್ರೋಲ "ಎಂಬ ಗ್ರಾಮದಲ್ಲಿರುವದು. ಅನಂತಪಾಲನು ಕ್ರಿ.ಶ. ೧೧೦೫ ರಿಂದ ೧೧೧೮ ವರೆಗೆ ಇದ್ದನು."

ಈ ರೀತಿಯಾಗಿ ಸ್ಮಾರ್ತಮತೀಯರಾದ ಪ್ರಭಾಕರಶಾಸ್ತ್ರಿಗಳವರು ಬರೆದು, ಅನಂತಪಾಲರಾಜನೂ ಅವನಿಗೆ ಗುರುವಾಗಿದ್ದ ಶ್ರೀಪತಿಪಂಡಿತಾರಾಧ್ಯರೂ ೧೧ನೆಯ ಶತಮಾನದಲ್ಲಿ ಜನ್ಮಧಾರಣಮಾಡಿದರೆಂಬ ವಿಷಯವನ್ನು ಘಂಟಾಘೋಷವಾಗಿ ಸಾರಿದ್ದಾರೆ.

ಹೀಗೆ ಒಂದಲ್ಲ, ಎರಡಲ್ಲ, ನೂರಾರು ಪ್ರಮಾಣಗಳು ಶ್ರೀಪತಿಪಂಡಿತರು ೧೧ನೆಯ ಶತಮಾನದಲ್ಲಿದ್ದರೆಂದು ಸಾರುತ್ತಿರುವವು. ಆದುದರಿಂದ ರಾಯರು ಇನ್ನುಮುಂದಾದರೂ ತಮ್ಮ ತಪ್ಪುಬರವಣಿಗೆಯನ್ನು ತಿದ್ದಿಕೊಳ್ಳಬೇಕು. ನಾನು ಇಲ್ಲಿಯವರೆಗೆ ತೋರಿಸಿರುವ ಅನೇಕ ಪ್ರಮಾಣಗಳಿಂದ ರಾಯರ ಮನಸ್ಸು ಪೂರ್ಣತೃಪ್ತಿಯನ್ನು ಹೊಂದಿರಬಹುದೆಂದು ಭಾವಿಸುತ್ತೇನೆ. ತಮ್ಮ ತಪ್ಪನ್ನು ತಿದ್ದಿಕೊಂಡರೆ ರಾಯರಿಗೆ ಭೂಷಣವೇ ಹೊರತು ಅವರ ಗೌರವಕ್ಕೆ ಎಷ್ಟೂ ಚ್ಯುತಿಯು ಬರುವದಿಲ್ಲವೆಂದು ಅವರು ಭಾವಿಸಬೇಕು. ತಪ್ಪನ್ನು ಒಪ್ಪಿಕೊಂಡರೆ ಸುವರ್ಣಕ್ಕೆ ಪುಟಹಾಕಿದಂತೆ ತಮ್ಮ ಕೀರ್ತಿಗೆ ಅದ್ಭುತವಾದ ತೇಜಸ್ಸು ಪ್ರಾಪ್ತವಾಗುವದರಲ್ಲಿ ಸಂದೇಹವಿಲ್ಲವೆಂಬುದನ್ನು ರಾಯರು ಚನ್ನಾಗಿ ತಿಳಿದುಕೊಳ್ಳಬೇಕು. ಅಸ್ತು !

# ಮಿಕ್ಕಶಾಸನಗಳ ವಿಚಾರ.

ಮುಂದೆ ರಾಯರು ತಮ್ಮ ಉತ್ತರದಲ್ಲಿ—

" ಕೊಂಡವೀಡಿನಲ್ಲಿ ದೊರೆತ 1405 ನೆಯ ವರ್ಷದ ಶಾಸನವೊಂದರಲ್ಲಿ ಶ್ರೀಪತಿಪಂಡಿತಾಚಾರ್ಯರ ಮೊಮ್ಮಗನ ಹೆಸರು ಬಂದಿರುವುದರಿಂದ ನಮ್ಮ ಅಭಿಪ್ರಾಯವು ದೃಢಪಡುತ್ತದೆ."

ಎಂದು ಬರೆದಿರುವರು. ೧೧ ನೆಯ ಶತಮಾನದಲ್ಲಿ ವೀರಶೈವಮತಪದ್ಧತಿಯಂತೆ ಬ್ರಹ್ಮಚರ್ಯಾಶ್ರಮದಿಂದ ಯತ್ಯಾಶ್ರಮವನ್ನು ಹೊಂದಿದ್ದ ಶ್ರೀಪತಿಪಂಡಿತಾಚಾರ್ಯರಿಗೆ ೧೪೦೫ ರಲ್ಲಿ ಮೊಮ್ಮಗನಿದ್ದನೆಂದು ಹೇಳಿರುವದೂ, ದ್ವಾಪರಯುಗದಲ್ಲಿ ಕೇವಲ ಬ್ರಹ್ಮಚಾರಿಯಾಗಿದ್ದ ಭೀಷ್ಮಾಚಾರ್ಯನಿಗೆ, ಕಲಿಯುಗದಲ್ಲಿ ಶಾಲಿವಾಹನಶಕ ೧೮೬೦ ರಲ್ಲಿ ಮೊಮ್ಮಗನಿದ್ದನೆಂದು ಹೇಳುವದೂ ಎರಡೂ ಒಂದೇ ಮಾಲಿಕೆಯೊಳಗಿನ ಮಣಿಗಳಂತಿದ್ದು ಕೇವಲ ಹಾಸ್ಯಾಸ್ಪದವಾಗಿದೆ. ಅಸ್ತು!

ರಾಯರು ಹೇಳುವ M.E.R. 539 ನೆಯ ನಂಬರಿನ ಶಾಸನದಲ್ಲಿ ಹೆಚ್ಚಿನ ವಿಷಯವೇನೂ ಇರದೆ, ಈ ಕೆಳಗೆ ಬರೆದಂತೆ ವಾಕ್ಯಗಳಿರುತ್ತವೆ.

" ವಿಶ್ವೇಶ್ವರದೇವರ ಗೋಪುರಾನಕು ದಮ್ಮಾಲಪಾಟಿ ಚೆನ್ನಮನೇನಿಂಗಾರು ತಮ ಗುರುವುಲು ನಿಲುವುಂಗನ್ನುಲು ವಡಸಿನ ಪಂಡಿತಾ ಆರಾಧ್ಯದೇವರ ಮನುಮಲು ಶ್ರೀಗಿರಿಅಯ್ಯಂಗಾರಿಕಿಂ ಪುಣ್ಯಮುಗಾಂ ಜೇಇಂಚಿನ ವಟ್ಟ ||

" ದಮ್ಮಾಲಪಾಟಿ ಚೆನ್ನಮನೇನಿಂಗಾರು ಎಂಬಾತನು ತನ್ನ ಗುರುವಾದ ಪಂಡಿತಾರಾಧ್ಯದೇವರ ಮೊಮ್ಮಗನಾದ ಶ್ರೀಗಿರಿಅಯ್ಯ ಎಂಬವರಿಗೆ ಪುಣ್ಯವು ಪ್ರಾಪ್ತವಾಗಲೆಂಬ ಉದ್ದೇಶದಿಂದ, ಅವರ ಹೆಸರಿನ ಮೇಲೆ ವಿಶ್ವೇಶ್ವರಗುಡಿಯ ಗೋಪುರಕ್ಕಾಗಿ ಒಂದು ಕಲ್ಲುತೊಲೆಯನ್ನು ಕೊಟ್ಟನು." ಎಂದು ಬರೆದಿದೆ. ಯಾವನೋ ಒಬ್ಬ " ಪಂಡಿತಾರಾಧ್ಯದೇವ " ನೆಂಬವನ ಹೆಸರನ್ನು ಹೇಳುವ ಈ ಶಾಸನಕ್ಕೂ ಶ್ರೀಪತಿಪಂಡಿತಾಚಾರ್ಯರಿಗೂ ರಾಯರು ಸಂಬಂಧವನ್ನು ಕಲ್ಪಿಸಿರುವುದು ಪರಮಾಶ್ಚರ್ಯಕರವಾಗಿದೆ.

ಅಸಂಬಂಧದಲ್ಲಿ ಸಂಬಂಧವನ್ನು ಕಲ್ಪಿಸುವ ಜಾಣ್ಮೆಯನ್ನು ಈ ರಾಯರಲ್ಲಿಯೇ ಕಲಿಯಬೇಕು. ಇರಲಿ; ರಾಯರು ಪಂಡಿತಾರಾಧ್ಯರೆಂದರೆ ಶ್ರೀಪತಿಪಂಡಿತಾರಾಧ್ಯರೊಬ್ಬರೆಂದೇ ತಿಳಿದಂತೆ ತೋರುತ್ತದೆ. ಆದುದರಿಂದಲೇ ೩-೪ಕಡೆಗೆ ಹೀಗೆ ಭ್ರಮಿಸಿದ್ದಾರೆ. ರಾಯರೇ! ವೀರಶೈವಮತದಲ್ಲಿ ಈ ಮತಸ್ಥಾಪಕರಾದ ಮೂಲಪಂಡಿತಾರಾಧ್ಯರ ಪವಿತ್ರನಾಮವನ್ನು ಅನೇಕ ಜನರು ತಮ್ಮ ಹೆಸರಿನ ಮುಂದೆ ಸಂಬಂಧಿಸಿಕೊಂಡಿದ್ದಾರೆ. “ **ಮಂಚನ ಪಂಡಿತಾರಾಧ್ಯ, ಮಲ್ಲಿಕಾರ್ಜುನಪಂಡಿತಾರಾಧ್ಯ, ಶ್ರೀಪತಿಪಂಡಿತಾರಾಧ್ಯ, ಭೀಮನಪಂಡಿತಾರಾಧ್ಯ, ವೃಷಭಪಂಡಿತಾರಾಧ್ಯ, ಮನ್ನ ಪಂಡಿತಾರಾಧ್ಯ** ” ಇದೇ ರೀತಿಯಾಗಿ ಅನೇಕಾನೇಕಜನರು ಆಗಿಹೋಗಿರುವರು. ಈ ವಿಷಯವನ್ನೆಲ್ಲ ತಿಳಿಯದೆ, ಯಾವನೋ ಒಬ್ಬನ ಹೆಸರನ್ನು ಜಗದ್ವಿಖ್ಯಾತರಾದ ಶ್ರೀಪತಿಪಂಡಿತಾರಾಧ್ಯರಿಗೆ ಸಂಬಂಧಿಸಿರುವದು ಕೇವಲ ಅನ್ಯಾಯವು. ಅಸ್ತು!

ಇನ್ನು ಇತ್ತೀಚೆಗೆ ಕರ್ನೂಲು ಡಿ|| ಪಾನೆಂ ಎಂಬಲ್ಲಿ ಕೇವಲ ಶ್ರೀಪತಿಪಂಡಿತಾಚಾರ್ಯರನ್ನೇ ನಿರ್ದೇಶಿಸಿ ಹೇಳುವ ನಾಲ್ಕು ಶಾಸನಗಳು ದೊರೆತಿವೆಯೆಂದು ರಾಯರು ಬರೆದಿದ್ದಾರೆ. ಆ ಶಾಸನಗಳಿಗೂ ಶ್ರೀಪತಿ ಪಂಡಿತರಿಗೂ ಯಾವ ಸಂಬಂಧವೂ ಇರುವುದಿಲ್ಲ. ಒಂದು ಶಾಸನದಲ್ಲಿ—

**ಶ್ರೀಯೋರುಗಂಟ್ಯಂತಿಕಮಾಚಿರಾಜು**
**ಪಲ್ಲೀಜನಿಃ ಶ್ರೀಗಿರಿಶೃಂಗವಾಸೀ।**
**ಶ್ರೀಪಂಡಿತಾರಾಧ್ಯಗೃಹಸ್ಯ ದಾಸೋ**
**ವಿಭೂತಿಗೌರಃ ಶರಣಾಗತೋ ವಃ ||**

ಎಂಬ ಒಂದೇ ಒಂದು ಶ್ಲೋಕಮಾತ್ರವಿದೆ. ಈ ಶಾಸನದಲ್ಲಿ ಕಾಲವನ್ನು ಹಾಕಿಲ್ಲ. “ ಯೊರುಗಂಟಿ ಎಂಬ ಗ್ರಾಮದ ಸಮೀಪದಲ್ಲಿರುವ ಮಾಚಿರಾಜುಪಲ್ಲಿಯಲ್ಲಿ ಹುಟ್ಟಿದವನೂ, ಶ್ರೀಶೈಲಪಂಡಿತಾರಾಧ್ಯರ ಮಠದ ಸೇವಕನೂ ಆದ ವಿಭೂತಿಗೌರಯ್ಯನು ನಿಮ್ಮಗಳಿಗೆ ಶರಣಾಗತನಾಗಿದ್ದಾನೆ.”

ಎಂದು ಈ ಶ್ಲೋಕದ ಅರ್ಥವಾಗುತ್ತದೆ. ರಾಯರು ಈ ಶಾಸನದಲ್ಲಿರುವ ಶ್ರೀಶೈಲಪಂಡಿತಾರಾಧ್ಯರ ಹೆಸರನ್ನು ನೋಡಿ, ಇದೂ ಸಹ ಶ್ರೀಪತಿ ಪಂಡಿತಾರಾಧ್ಯರ ಹೆಸರೇ ಎಂದು ಭ್ರಮಿಸಿದ್ದಾರೆ. ರಾಯರಿಗೆ ವೀರಶೈವ ಮತದಲ್ಲಿ ಎಷ್ಟುಜನ ಪಂಡಿತಾರಾಧ್ಯರು ಆಗಿಹೋಗಿದ್ದಾರೆಂಬ ವಿಷಯವು ತಿಳಿಯದಿರುವುದೇ ಈ ವಿಧವಾದ ಭ್ರಮೆಗೆ ಕಾರಣವಲ್ಲದೆ ಮತ್ತಾವುದೂ ಅಲ್ಲ. ರಾಯರು ಇನ್ನುಮುಂದೆ ಹಾಗೆ ಭ್ರಮಿಸಕೂಡದು.

ಇನ್ನು ಮಿಕ್ಕಶಾಸನಗಳಲ್ಲಿ–" **ವಿಭೂತಿಗೌರಯ್ಯನ ಶರಣಾರ್ಥಿ** " ಎಂದು ಸಂಸ್ಕೃತ, ತಮಿಳು, ತೆಲುಗು ಈ ಮೂರುಭಾಷೆಯ ಅಕ್ಷರಗಳಲ್ಲಿ ಒಂದೊಂದು ಸಾಲು ಮಾತ್ರ ಇದೆ. ಮತ್ತೇನೂ ಹೆಚ್ಚಿನದಿಲ್ಲ. ಇಷ್ಟೇ ರಾಯರು ಶೋಧಿಸಿರುವ ಶಾಸನಗಳ ಪ್ರತಾಪವು. ಆ ನಂಬರಿನ ಶಾಸನವನ್ನು ನೋಡಿರಿ ; ಈ ನಂಬರಿನ ಶಾಸನವನ್ನು ನೋಡಿರಿ ; ಎಂದು ರಾಯರು ಬರೆದಿರುವದು ಆಟಾಟೋಪವಲ್ಲದೆ ಮತ್ತೇನೂ ಪುರುಷಾರ್ಥವಿರುವುದಿಲ್ಲ. ಇದರಿಂದ ರಾಯರಿಗೆ ಯಾವ ಸಿದ್ಧಾಂತವಾಯಿತೋ ನಮಗಂತೂ ತಿಳಿಯದಾಗಿದೆ. ಇಲ್ಲಿಗೆ ರಾಯರು ಬರೆದಿರುವ ಶಾಸನಗಳ ಪುರಾಣವೆಲ್ಲವೂ ಮುಗಿದಂತಾಯಿತು. ಇನ್ನು ಮಧ್ವಶಬ್ದವಿಚಾರವನ್ನು ಮಾಡೋಣ !

## " ಮಧ್ವ" ಶಬ್ದವು ಮಧ್ಯದಲ್ಲಿ ಸೇರಿದುದು.

ನಾನು ನನ್ನ ಮೊದಲನೆಯ ಲೇಖದಲ್ಲಿ—ಶ್ರೀಕರಭಾಷ್ಯದಲ್ಲಿ ಮಧ್ವಶಬ್ದವನ್ನು ಮಧ್ಯದಲ್ಲಿ ಯಾರೋ ಸೇರಿಸಿದ್ದಾರೆ. ೧೧ನೆಯ ಶತಮಾನದಲ್ಲಿದ್ದ ಶ್ರೀಪತಿಪಂಡಿತಾಚಾರ್ಯರು ೧೩ ನೆಯ ಶತಮಾನದಲ್ಲಿದ್ದ ಮಧ್ವಾಚಾರ್ಯರ ಹೆಸರನ್ನು ತೆಗೆದುಕೊಂಡಿರುವರೆಂದು ಹೇಳುವದು ಕೇವಲ ಅಸಂಗತವೆಂದು ಬರೆದಿದ್ದರೂ, ರಾಯರ ಮನಸ್ಸಿಗೆ ಅದು ಅಂಟಿದಂತೆ ತೋರುವದಿಲ್ಲ. ಅದನ್ನು ಈಗ ಅಂಟಿಸಬೇಕಾಗಿರುವದು. ರಾಯರು ನಾನು ಪ್ರತಿಪಾದಿಸುವ ವಿಷಯವನ್ನು ಚನ್ನಾಗಿ ತಿಳಿದುಕೊಳ್ಳಬೇಕು.

ಶ್ರೀಪತಿಪಂಡಿತಾರಾಧ್ಯರು ತಮ್ಮ ಭಾಷ್ಯದಲ್ಲಿ ವಿಶೇಷವಾಗಿ ಅದ್ವೈತ ಸಿದ್ಧಾಂತವನ್ನೂ, ವಿಶಿಷ್ಟಾದ್ವೈತಸಿದ್ಧಾಂತವನ್ನೂ ಖಂಡಿಸಿರುವರು. ದ್ವೈತ ಸಿದ್ಧಾಂತವನ್ನು ಸಂದರ್ಭಾನುಸಾರವಾಗಿ ಖಂಡಿಸಿರುವರು. ಶ್ರೀಪತಿಪಂಡಿತಾ ರಾಧ್ಯರ ದೃಷ್ಟಿಯು ಅದ್ವೈತ ಮತ್ತು ವಿಶಿಷ್ಟಾದ್ವೈತಸಿದ್ಧಾಂತಖಂಡನದ ಮೇಲೆ ಹೆಚ್ಚಾಗಿದ್ದರೂ, ಆ ಸಿದ್ಧಾಂತಪ್ರವರ್ತಕರಾದ ಶಂಕರಾಚಾರ್ಯ ಮತ್ತು ರಾಮಾನುಜಾಚಾರ್ಯರ ಹೆಸರನ್ನು ಎಲ್ಲಿಯೋ ಒಮ್ಮೆ ತೆಗೆದು ಕೊಂಡಿರುವರು. ಆದರೆ "ಮಧ್ವ" ಶಬ್ದವು ೩-೪ಕಡೆಗೆ ಬಂದಿರುವದರಿಂದ, ಈ ಶಬ್ದವನ್ನು ಪೂರ್ವದಲ್ಲಿ ಯಾರೋ ಬೇಕೆಂದೇ ಸೇರಿಸಿದ್ದಾರೆಂದು ಘಂಟಾ ಘೋಷವಾಗಿ ಹೇಳಬಹುದಾಗಿದೆ. ಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಎಷ್ಟೋಕಡೆಗೆ ಶಂಕರಭಾಷ್ಯದ ಮತ್ತು ರಾಮಾನುಜಭಾಷ್ಯದ ಪಂಕ್ತಿ ಗಳನ್ನು ತೆಗೆದುಕೊಂಡು ಖಂಡಿಸಿದ್ದಾರೆ. ಮಧ್ವಭಾಷ್ಯದ ಪಂಕ್ತಿಗಳನ್ನು ತೆಗೆದುಕೊಂಡು ಎಲ್ಲಿಯೂ ಖಂಡಿಸಿರುವದಿಲ್ಲ. ಇದ್ದರೆ ರಾಯರು ತೋರಿಸಲಿ. ಶ್ರೀಪತಿಪಂಡಿತಾಚಾರ್ಯರು ಮಧ್ವಾಚಾರ್ಯರಿಗಿಂತಲೂ ಇತ್ತೀಚಿನವರಾಗಿದ್ದರೆ, ಮಧ್ವಭಾಷ್ಯದ ಪಂಕ್ತಿಗಳನ್ನು ತೆಗೆದುಕೊಂಡು ಖಂಡಿಸುತ್ತಿದ್ದರು. ಹಾಗೆ ಮಾಡದಿರುವದರಿಂದ ಇವರು ಮಧ್ವಾಚಾರ್ಯರಿಗಿಂತಲೂ ಪೂರ್ವ ದವರೆಂಬುದರಲ್ಲಿ ತಿಲಮಾತ್ರವೂ ಸಂಶಯವಿಲ್ಲ. ಸುಮ್ಮನೆ ಹಿಂಡುಶಬ್ದಗಳ ನಡುವೆ ಮಧ್ವಶಬ್ದವು ಸೇರಿಹೋಗಿದೆ. ಇದರಿಂದ ಯಾವ ಪುರುಷಾರ್ಥವೂ ಸಿದ್ಧಿಸುವಂತಿಲ್ಲ. ಯಾವ ವಾಕ್ಯಗಳಲ್ಲಿ ಮಧ್ವಶಬ್ದವು ಸೇರಿದೆಯೋ, ಅಲ್ಲಿರುವ ಮಧ್ವಶಬ್ದವನ್ನು ತೆಗೆದುಹಾಕಿದರೆ ಅರ್ಥವು ಕೆಡದೆ ಆ ವಾಕ್ಯಗಳಿಗೆ ಇನ್ನೂ ಹೆಚ್ಚು ಶೋಭೆಯುಂಟಾಗುವದು. ವಾಚಕರ ಅವಗಾಹನಕ್ಕಾಗಿ ಮಧ್ವಶಬ್ದವು ಶೇರಿರುವ ವಾಕ್ಯಗಳನ್ನು ಇಲ್ಲಿ ಉದಾಹರಿಸುವದಾಗುವದು. ಪಂಡಿತಜನರು ಪರಾಮರ್ಶಿಸಬೇಕು.

ಶ್ರೀಕರಭಾಷ್ಯದಲ್ಲಿ ಒಂದು ಕಡೆಗೆ "**ಮಧ್ವದ್ವೈತಕ್ಷಪಣಕ ತಾರ್ಕಿಕಾದಯೋ ಜೀವಾನಾಂ ವಿಭುತ್ವಾಂಗೀಕಾರಾತ್**" ಎಂಬ

ವಾಕ್ಯವಿದೆ. ಈ ವಾಕ್ಯದಲ್ಲಿರುವ ಮಧ್ವಶಬ್ದವನ್ನು ತೆಗೆದುಹಾಕಿದರೆ ಅರ್ಥವ್ಯತ್ಯಾಸವಾಗದೆ, ಇನ್ನೂ ಹೆಚ್ಚು ಶೋಭೆಯುಂಟಾಗುವದು. ಈ ವಾಕ್ಯದಲ್ಲಿ "**ಮಧ್ವ**" ಮತ್ತು "**ದ್ವೈತ**" ಎಂಬ ಎರಡು ಶಬ್ದಗಳು ಸೇರಿವೆ. ಮಧ್ವವಾವುದೋ? ದ್ವೈತವಾವುದೋ? ಎಂಬುದು ಯಾರಿಗೂ ತಿಳಿಯದಾಗಿದೆ. ಇಲ್ಲಿ ಕೇವಲ "**ದ್ವೈತಕ್ಷಪಣಕತಾರ್ಕಿಕಾದಯಃ**" ಎಂದು ಇಷ್ಟೇ ಇರಬೇಕು. "ಮಧ್ವ" ಶಬ್ದವು ಇರಲೇಕೂಡದು.

ಮತ್ತೊಂದು ಕಡೆಗೆ "**ಭಾಗವತಪಾಂಚರಾತ್ರಮಧ್ವಾದಿ ವೈಷ್ಣವಾನಾಂ ಜಗತ್ಕಾರಣೇಶ್ವರಸ್ಯ ಶರೀರತ್ವಪರಿಗ್ರಹಾತ್**" ಎಂಬ ವಾಕ್ಯವಿದೆ. ಇಲ್ಲಿ ಮಧ್ವಶಬ್ದವು ಇರಲೇಕೂಡದು. ಈ ವಾಕ್ಯದಲ್ಲಿ "**ಭಾಗವತ-ಪಾಂಚರಾತ್ರ**" ಎಂದು ಮತಗಳ ಹೆಸರುಗಳನ್ನು ಹೇಳಿ, ಅದರ ಮುಂದೆಯೇ '**ಮಧ್ವ**' ಎಂಬ ಆಚಾರ್ಯರ ಹೆಸರನ್ನು ಬರೆದರೆ ಭಾಷ್ಯಕಾರರು ಬುದ್ಧಿಹೀನರಾಗುವರು. ಆದುದರಿಂದ ಇಲ್ಲಿ ಮುಖ್ಯವಾಗಿ "**ಮಧ್ವ**" ಶಬ್ದದ ಬದಲಾಗಿ "**ದ್ವೈತ**" ಶಬ್ದವಿರಬೇಕು. ಅಂದರೆ ಭಾಷ್ಯಕಾರರ ವಾಕ್ಯಕ್ಕೆ ಶೋಭೆಯು ಬರುವದು. ಇಲ್ಲದಿದ್ದರೆ ರಾಯರು ಶ್ರೀಕರಭಾಷ್ಯಕ್ಕೆ ಸಂಸ್ಕೃತಪೀಠಿಕೆಯನ್ನು ಬರೆದಂತೆ ಅಸಂಬದ್ಧವಾಗಿ ಹಾಸ್ಯಾಸ್ಪದವಾಗುವದು.

ಮತ್ತೊಂದೆಡೆಯಲ್ಲಿ "**ದ್ವೈತಭಾಗವತಪಾಂಚರಾತ್ರಾದಿವೈಷ್ಣವಮತೇ ಜಗತ್ಕಾರಣಸ್ಯ ನಾರಾಯಣಸ್ಯ**" ಎಂಬ ವಾಕ್ಯವಿರುವದು. ಈ ವಾಕ್ಯದಲ್ಲಿ ಯಾಕೋ ಮಧ್ವಶಬ್ದವು ಸೇರಿಲ್ಲ. ಇದು ಭಾಷ್ಯಕಾರರ ಸುದೈವವೆಂದೇ ಭಾವಿಸಕಾಗಿದೆ. ಈ ವಾಕ್ಯದಲ್ಲಿ "**ದ್ವೈತ-ಭಾಗವತ-ಪಾಂಚರಾತ್ರಾದಿ**"ಎಂಬಶಾಸ್ತ್ರೀಯಶಬ್ದಗಳು ಹೇಗೆವಿರಾಜಿಸುತ್ತಿರುವವೋ, ಹಾಗೆಯೇ ಮೇಲೆ ತೋರಿಸಿದ ವಾಕ್ಯದಲ್ಲಿಯೂ ಸಹ "**ದ್ವೈತ-ಭಾಗವತ-ಪಾಂಚರಾತ್ರಾದಿವೈಷ್ಣವಾನಾಂ**" ಎಂದಿರಬೇಕು. ಅಂದರೆ ಭಾಷ್ಯಕಾರರ ಪಂಕ್ತಿಗಳಿಗೆ ಗೌರವವು ಬರುತ್ತದೆ. ಇಲ್ಲದಿದ್ದರೆ ಭಾಷ್ಯಕಾರರ ಮಾತುಗಳು ಹುಡುಗರ ಮಾತಿನಂತಾಗುವವೆಂಬುದನ್ನು ರಾಯರು ಲಕ್ಷಿಸಬೇಕು.

ಮತ್ತೊಂದು ಕಡೆಗೆ " ತಾರ್ಕಿಕಮಧ್ವಾದಿಕೇವಲಭೇದವಾದಿನಾಂ ಬೌದ್ಧಾದಿವತ್ಸರ್ವಶ್ರುತಿಸಮನ್ವಯಾಭಾವಾತ್ " ಎಂಬ ವಾಕ್ಯದಲ್ಲಿ ಮಧ್ವಶಬ್ದವು ಸೇರಿದೆ. ಇದರಲ್ಲಿ ಸೇರಿರುವ ಮಧ್ವಶಬ್ದವನ್ನು ತೆಗೆದುಹಾಕಿ,"ತಾರ್ಕಿಕಾದಿಕೇವಲಭೇದವಾದಿನಾಂ ಬೌದ್ಧಾದಿವತ್ " ಎಂದು ಮಾಡಿದರೆ, ಯಾವ ವಿಧವಾದ ಅರ್ಥವ್ಯತ್ಯಾಸವೂ ಆಗುವದಿಲ್ಲ. ಆದುದರಿಂದ ಈ ವಾಕ್ಯವು ಹೀಗೆಯೇ ಇರಬೇಕು. ಭಾಷ್ಯದಲ್ಲಿ ಸೇರಿರುವ ಮಧ್ವಶಬ್ದದ ಪುರಾಣವಿಷ್ಟೆ! ಮತ್ತೇನೂ ಹೆಚ್ಚಿನದಿಲ್ಲ. ಇದರಿಂದ ಮಧ್ವಶಬ್ದವು ಮಧ್ಯದಲ್ಲಿ ಸೇರಿದ್ದೇ ನಿಜವೆಂಬ ವಿಷಯವು ಈಗ ರಾಯರ ಮನಸ್ಸಿಗೆ ಚನ್ನಾಗಿ ಅಂಟಿರಬಹುದೆಂದು ಭಾವಿಸುತ್ತೇನೆ. ಅಸ್ತು!

ದ್ವೈತಸಿದ್ಧಾಂತವು ಬಹುಪುರಾತನವಾದುದು. ಮಧ್ವಾಚಾರ್ಯರಾದರೂ ತಮ್ಮ ಭಾಷ್ಯವನ್ನು "ಹಯಗ್ರೀವಬ್ರಹ್ಮವಿದ್ಯಾ " ಎಂಬ ಗ್ರಂಥದ ಆಧಾರದಿಂದ ಬರೆದಿರುವರೆಂಬ ವಿಷಯವನ್ನು ರಾಯರು ತಮ್ಮ ಇಂಟ್ರಡಕ್ಷನ್ನಿನಲ್ಲಿಯೇ ಬರೆದಿರುವರು. ಆದುದರಿಂದ ಮಧ್ವಶಬ್ದವು ಮಧ್ಯದಲ್ಲಿ ಸೇರಿರುವದೆಂಬುದೇ ಘಂಟಾಘೋಷವಾದ ಸಿದ್ಧಾಂತವು !

## ರಾಯರು ವೀರಶೈವಸಿದ್ಧಾಂತದ ಸ್ವರೂಪವನ್ನೇ ಅರಿಯರು.

ರಾಯರಿಗೆ ಪ್ರಥಮತಃ ಸಂಸ್ಕೃತಭಾಷೆಯ ಪರಿಚಯವೇ ಸರಿಯಾಗಿಲ್ಲವೆಂಬ ವಿಷಯವನ್ನು ಈ ಮೊದಲೇ ಪ್ರತಿಪಾದಿಸಿದ್ದೇನೆ. ಸರಿಯಾಗಿ ಸಂಸ್ಕೃತಭಾಷೆಯನ್ನೇ ಅರಿಯದ ರಾಯರು ಶ್ರೀಕರಭಾಷ್ಯದ ನಿಜತತ್ತ್ವವನ್ನು ಅರಿಯುವದಂತೂ ದೂರೇ ಉಳಿಯಿತು. ಹೀಗಿದ್ದರೂ ರಾಯರು ತಮ್ಮ ಉತ್ತರದ ಕೊನೆಯಭಾಗದಲ್ಲಿ—

> " ವೀರಶೈವಸಿದ್ಧಾಂತಕ್ಕಾಗಿ ೩೬ ವರ್ಷಗಳ ಆಯುರ್ದಾಯವನ್ನು ವಿನಿಯೋಗಿಸಿದ್ದೇನೆ."

ಎಂದು ಬರೆದಿರುವರು. ವೀರಶೈವಸಿದ್ಧಾಂತಕ್ಕಾಗಿ ಇವರು ೩೬ ವರ್ಷಗಳ ಕಾಲವನ್ನುವಿನಿಯೋಗಿಸಿರುವರಂತೆ! ಹೇಗೆ ವಿನಿಯೋಗಿಸಿದರೋ ಎಂಬುದು ಆ ಜಗನ್ನಿಯಾಮಕನಿಗೇ ಗೊತ್ತು! ರಾಯರು ತಮ್ಮ ಇಂಟ್ರಡಕ್ಷನ್ನಿನ ೭೦೧ ನೆಯ ಪುಟದಲ್ಲಿ ವೀರಶೈವಶಾಸ್ತ್ರಪ್ರಸಿದ್ಧವಾದ ಷಟ್‌ಸ್ಥಲಗಳ ಹೆಸರುಗಳನ್ನು ಬರೆಯುವಾಗ್ಗೆ"**ಭಕ್ತಿ-ಮಹೇಶ-ಪ್ರಸಾದ-ಪ್ರಾಣಲಿಂಗ-ಶರಣ-ಐಕ್ಯ**" ಎಂದು ಬರೆದಿದ್ದಾರೆ. ಈ ಹೆಸರುಗಳನ್ನು ನೋಡಿ ವೀರಶೈವರೆಲ್ಲರೂ ನಗುತ್ತಿರುವರು. ರಾಯರಿಗೆ ವೀರಶೈವಶಾಸ್ತ್ರದ ಪಾರಿಭಾಷಿಕ ಶಬ್ದಗಳೇ ಮೊದಲು ಗೊತ್ತಿರುವುದಿಲ್ಲ. ಹೀಗಿದ್ದರೂ ೩೬ ವರ್ಷಗಳ ಕಾಲವನ್ನು ವೀರಶೈವಸಿದ್ಧಾಂತಕ್ಕಾಗಿ ವಿನಿಯೋಗಿಸಿದ್ದೇನೆಂದು ಬರೆದಿರುವದನ್ನು ನೋಡಿದರೆ, ಇವರ ಧೈರ್ಯಕ್ಕೆ ಎಣೆಯೇ ಇಲ್ಲವೆಂದು ಹೇಳಬೇಕಾಗಿದೆ. ಷಟ್‌ಸ್ಥಲಗಳ ಹೆಸರುಗಳು ರಾಯರು ಬರೆದಿರುವಂತೆ ಇರುವದಿಲ್ಲ. "**ಭಕ್ತ-ಮಾಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣ-ಐಕ್ಯ**" ಈ ರೀತಿಯಾಗಿರುತ್ತವೆ. ರಾಯರಿಗೆ ಮೊದಲು ಷಟ್‌ಸ್ಥಲಗಳ ಹೆಸರುಗಳೇ ಗೊತ್ತಿಲ್ಲವೆಂದ ಮೇಲೆ, ಇವರು ಆ ಸ್ಥಲಗಳ ಸ್ವರೂಪವನ್ನು ತಿಳಿಯುವ ಬಗೆಯೆಂತು? ರಾಯರು ಶ್ರೀಕರಭಾಷ್ಯದಲ್ಲಿ "**ಅಷ್ಟಾವರಣ**" ಎಂಬ ಪಾರಿಭಾಷಿಕಶಬ್ದವನ್ನು "**ಅಷ್ಟಾವರುಣ**" ಎಂದು ಮುದ್ರಿಸಿದ್ದಾರೆ. ಇತ್ಯಾದಿವಿಷಯಗಳನ್ನು ವಿಮರ್ಶಮಾಡಿ ನೋಡಿದರೆ ರಾಯರಿಗೆ ವೀರಶೈವ ಸಿದ್ಧಾಂತದ ಗಂಧವೇ ಸೋಂಕಿಲ್ಲವೆಂದು ಸ್ಪಷ್ಟವಾಗಿ ಕಂಡುಬರುತ್ತದೆ.

ಈ ರೀತಿಯಾಗಿ ಪಾರಿಭಾಷಿಕಶಬ್ದಜ್ಞಾನವಿಲ್ಲದ ರಾಯರು ಶ್ರೀಕರ ಭಾಷ್ಯದ ಮೇಲೆ ಇಂಗ್ಲೀಷ್ ಭಾಷೆಯಲ್ಲಿ ಒಬ್ಬರಿಗೆ ಎತ್ತಲಿಕ್ಕಾಗದಷ್ಟು ದಪ್ಪವಾದ ಪುಸ್ತಕವನ್ನು ಬರೆದಿರುವದನ್ನು ನೋಡಿ ವೀರಶೈವಜಗತ್ತೆಲ್ಲ ಪರಮಾಶ್ಚರ್ಯಯುತವಾಗಿದೆ. ಸಿದ್ಧಾಂತದ ವಿಷಯದಲ್ಲಿ ರಾಯರು ಬರೆದಿರುವ ಇಂಟ್ರಡಕ್ಷನ್ನನ್ನು ಖಂಡಿಸುತ್ತ ಹೋದರೆ, ಇವರ ಪುಸ್ತಕಕ್ಕೆ ನಾಲ್ಕರಷ್ಟು ದಪ್ಪವಾದ ಪುಸ್ತಕವಾಗಬಹುದು. ಸುಮ್ಮನೆ

ಲೇಖವನ್ನು ಬೆಳೆಯಿಸುವದರಲ್ಲಿ ಪುರುಷಾರ್ಥವಿಲ್ಲವೆಂದು ಭಾವಿಸಿ, ರಾಯರಿಗೆ ಈ ಸಿದ್ಧಾಂತದಲ್ಲಿ ಎಷ್ಟುಮಟ್ಟಿಗೆ ಜ್ಞಾನವಿರಬಹುದೆಂಬುದನ್ನು ಇಲ್ಲಿ ಛಾಯಾಮಾತ್ರವಾಗಿ ತೋರಿಸಿದೆ. ಇಷ್ಟರಿಂದಲೇ ಕುಶಲರು ಇವರಲ್ಲಿ ರುವ ವೀರಶೈವಸಿದ್ಧಾಂತಜ್ಞಾನಸ್ವರೂಪವನ್ನು ಅರಿತಿರಬಹುದು. ಅಸ್ತು !

ಈ ರೀತಿಯಾಗಿ ರಾಯರು ಈ ಸಿದ್ಧಾಂತದ ಸ್ವರೂಪವನ್ನರಿಯದೆ ಮನಸ್ಸಿಗೆ ಬಂದಂತೆ ಪುಸ್ತಕವನ್ನು ಬರೆದು ವೀರಶೈವಸಿದ್ಧಾಂತದ ಬಗ್ಗೆ ಮಹಾಜನಗಳಲ್ಲಿ ಅಯಥಾರ್ಥಜ್ಞಾನವನ್ನುಂಟುಮಾಡಿಬಿಟ್ಟಿದ್ದಾರೆ. ಈ ವಿಧವಾಗಿ ಅನೇಕಾನೇಕದೋಷಗಳಿಂದ ಕೂಡಿರುವ ಈ ಗ್ರಂಥವನ್ನು ಶ್ರೀಮನ್ಮಹಾರಾಜರವರಿಗೆ ಸಮರ್ಪಿಸಿದುದು ಎಷ್ಟೂ ಸರಿಯಾದುದಲ್ಲ. ಇಂತಹ ಅಸಂಬದ್ಧಗ್ರಂಥದ ಮುದ್ರಣಕ್ಕಾಗಿ ವೀರಶೈವಫಂಡಿನವರು ಸಮಾಜದ ದ್ರವ್ಯವನ್ನು ಸೂರೆಮಾಡಿರುವದು ವಿಷಾದದ ಸಂಗತಿಯಾಗಿದೆ. ಈ ಗ್ರಂಥವನ್ನು ದೇಶದೇಶಾಂತರಗಳಲ್ಲಿ ಹರಡಿರುವದಂತೂ ಪರಮವಿಷಾದ ಕರವು. ಒಟ್ಟಿಗೆ ರಾಯರು ಇಂಗ್ಲೀಷಿನಲ್ಲಿ ಬರೆದಿರುವ ಇಂಟ್ರೊಡಕ್ಷನ್ನು ವೀರಶೈವಮತಕ್ಕೆ ಕಲಂಕಪ್ರಾಯವಾಗಿರುವದು. ಆದುದರಿಂದ ವೀರಶೈವ ಫಂಡಿನವರು ರಾಯರ ಈ ಗ್ರಂಥವನ್ನು ಇನ್ನುಮುಂದಾದರೂ ಪ್ರಚಾರ ಮಾಡುವದಕ್ಕೆ ಅವಕಾಶಕೊಡದಂತೆ ಮಾಡಿದರೆ, ವೀರಶೈವಮತಕ್ಕೆ ಮಹೋಪಕಾರವನ್ನು ಮಾಡಿದಂತಾಗುವದೆಂದು ವೀರಶೈವರೆಲ್ಲರೂ ನಂಬಿದ್ದಾರೆ. ಮಹಾಜನಗಳು ರಾಯರು ಬರೆದ ಇಂಟ್ರೊಡಕ್ಷನ್ನಿನಲ್ಲಿರುವ ವಿಷಯಗಳೆಲ್ಲವೂ ಸಾಧುವಾಗಿವೆಯೆಂದು ತಿಳಿದುಕೊಂಡು, ಶ್ರೀಕರ ಭಾಷ್ಯಕಾರರ ಮತ್ತು ಇತರ ಗ್ರಂಥಕಾರರ ಕಾಲದ ವಿಷಯದಲ್ಲಿಯೂ, ವೀರಶೈವತತ್ತ್ವವಿಷಯದಲ್ಲಿಯೂ ಭ್ರಾಂತಿಯುಳ್ಳವರಾಗಬಾರದೆಂದು ಕೋರಿ, ಈ ಲೇಖವನ್ನು ಪೂರ್ತಿಗೊಳಿಸುತ್ತೇನೆ.

ಸತ್ಯಮೇವ ವಿಜಯತೇ ! ಯತೋ ಧರ್ಮಸ್ತತೋ ಜಯಃ !!

ಸರ್ವೇ ಜನಾಃ ಸುಖಿನೋ ಭವಂತು.

ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರ ಸ್ವಾಮಿತ್ವದಿಂದ

ಆವಿರ್ಭವಿಸಿರುವ

# ಶ್ರೀಕಾಶೀನಾಥಗ್ರಂಥಮಾಲೆಯಲ್ಲಿ ಪ್ರಕಟವಾಗಿರುವ ಗ್ರಂಥಗಳು.

ಪುಸ್ತ

| | | | |
|---|---|---|---|
| ೧ | ವೈದಿಕವಾಙ್ಮಯರಹಸ್ಯ | .... | ೪ ಆಣೆ. |
| ೨ | ಸಚಿತ್ರರೇಣುಕವಿಜಯ | .... | ೧ ರೂ. |
| ೩ | ರೇಣುಕಾಚಾರ್ಯಶತಕ | .... | ೨ ಆಣೆ. |
| ೪ | ಮಾಹೇಶ್ವರದೀಕ್ಷಾವಿಧಿ | .... | ೧೨ ಆಣೆ. |
| ೫ | ವೀರಶೈವರತ್ನ (೫ನೆಯ ಆವೃತ್ತಿ) | .... | ೨ ರೂ. |
| ೬ | ಸಿದ್ಧಾಂತಶಿಖೋಪನಿಷದ್ಭಾಷ್ಯ | .... | ೧ ರೂ. |
| ೭ | ಸಿದ್ಧಾಂತಸಾರಾವಳಿ | .... | ೧೨ ಆಣೆ. |
| ೮ | ಬಸವಧ್ವಾಂತದಿವಾಕರ | .... | ೮ ಆಣೆ. |
| ೯ | ಆಗಮಪರಿಜ್ಞಾನ | .... | ೮ ಆಣೆ. |
| ೧೦ | ಗೋತ್ರಸೂತ್ರಪಟ | .... | ೧ ಆಣೆ. |
| ೧೧ | ಪಂಚಾಚಾರ್ಯಾಷ್ಟೋತ್ತರಶತನಾಮಾವಳಿ | | ೨ ಆಣೆ. |
| ೧೨ | Speeches by Pandit Shri Kāshināthashāstriji (*in English*) | | 12 As. |
| ೧೩ | ಪಂಡಿತಶ್ರೀಕಾಶೀನಾಥಶಾಸ್ತ್ರುಲವಾರಿ ಭಾಷಣಮು(ತೆಲಗು) | | ೮ ಆಣೆ. |
| ೧೪ | ಶಿವಶಕ್ತಿವಿಲಾಸ | .... | ೨ ಆಣೆ. |
| ೧೫ | ಬಸವಾದಿನಿಜತತ್ತ್ವದರ್ಪಣ | .... | ೨ ಆಣೆ. |
| ೧೬ | ಸಂಕ್ಷಿಪ್ತಶಿವಪೂಜಾವಿಧಿ | .... | ೧ ಆಣೆ. |
| ೧೭ | ಸನ್ಯಾಸಾಶ್ರಮವಿಮರ್ಶ (ಸಂಸ್ಕೃತ) | .... | ೧ ಆಣೆ. |

---

**ಸೂಚನೆ**—ಒಂದು ರೂಪಾಯಿಗಿಂತಲೂ ಕಡಿಮೆ ಆರ್ಡರುಗಳಿಗೆ ವಿ.ಪಿ. ಕಳುಹಿಸುವುದಿಲ್ಲ. ೫ ರೂಪಾಯಿಗಳ ಮೇಲ್ಪಟ್ಟು ಪುಸ್ತಕಗಳನ್ನು ತರಿಸಿಕೊಳ್ಳುವವರಿಗೂ, ಪುಸ್ತಕ ವ್ಯಾಪಾರಿಗಳಿಗೂ ೧ ರೂಪಾಯಿಗೆ ೪ ಆಣೆಯಂತೆ ಕಮಿಷನ್ ಕೊಡಲಾಗುವದು.

ಮ್ಯಾನೇಜರ್, ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.